Photo by S. H. Kodak



ಬಹುಮಾನ
ಪಡೆದ ಶೀರ್ಷಿಕೆ

**ಸೆರೆಮನೆಯಲ್ಲಿದ್ದರೂ
ಸಹಕಾರ ಬೇಕು**

ಕಳಿಸಿದವರು :
ಕೆ. ಸರ್ವೋತ್ತಮ್




LUX
TOILET SOAP
LUX
TOILET SOAP
LUX

# ಚಂದಮಾಮ

ಜೂನ್ '57



ಅಲ್ಲದೆ, ಇಂದ್ರಜಾಲ, ಪದ್ಯಗಳು, ಚಿತ್ರಕಥೆ ಎಲ್ಲಾ ಇವೆ.

'ಆಹಾ, ಈಗ ಲೈಫ್‌ಬಾಯ್
ಸೋಪಿನಿಂದ ಸ್ನಾನ ಮಾಡಬೇಕು'

-ಆದರಿಂದ ಎಷ್ಟು
ನಿರ್ಮಲತೆ
ಮತ್ತು ಸಂತೃಪ್ತಿ!




ಭಾರತದಲ್ಲಿ ತಯಾರಿಸಲ್ಪಟ್ಟಿದೆ

L. 259-50 KN

## ಸೂಚನೆ

ಬರುವ ತಿಂಗಳ 'ಚಂದಮಾಮ' ಸಂಚಿಕೆಗಳನ್ನು ಈ ತಿಂಗಳ ಕಡೇ ವಾರದಲ್ಲೇ ಪೋಸ್ಟ್ ಮಾಡಲಾಗುತ್ತದೆ. ಆ ಸಂಚಿಕೆಗಳು ತಕ್ಕ ಕಾಲದಲ್ಲಿ ನಿಮಗೆ ಸೇರದಿದ್ದರೆ, ನಿಮ್ಮೂರ ಪೋಸ್ಟಾಫೀಸಿನಲ್ಲಿ ನೀವು ಕಂಪ್ಲೇಂಟು ಕೊಟ್ಟು, ಆ ಸಂಗತಿ ನಮಗೂ ತಿಳಿಸಬೇಕಾಗಿ ಕೋರಲಾಗಿದೆ.

ಚಂದಮಾಮ ಪಬ್ಲಿಕೇಷನ್ಸ್
ವಡಪಳನಿ :: ಮದ್ರಾಸ್-26.

## "ಚಂದಮಾಮ"ನಿಗೆ
## ಏಜಂಟರು ಬೇಕು

*

ಏಜಂಟರಿಲ್ಲದ ಕಡೆಗಳಲ್ಲಿ ಸಣ್ಣ ಸಣ್ಣ ಏಜಂಟರು ಬೇಕು. ನೀವು ಏಜಂಟರಾಗಿ ಸ್ವಲ್ಪ ಪ್ರತಿಗಳನ್ನು ಕೂಡಾ ತರಿಸಿಕೊಳ್ಳಬಹುದು. ಪ್ರತಿ ತಿಂಗಳೂ 3-0-0 ಕಳುಹಿಸುತ್ತಾ ಇದ್ದರೆ ನಿಮಗೆ 8 ಪ್ರತಿಗಳನ್ನು ಕಳುಹಿಸುತ್ತೇವೆ. ಈ ಪದ್ಧತಿಯಿಂದ ನಿಮಗೆ ಪ್ರತಿ ತಿಂಗಳೂ 1-0-0 ಲಾಭವಿರುತ್ತದೆ. ಪೂರ್ಣ ವಿವರಗಳಿಗೆ ಬರೆಯಿರಿ.

ಚಂದಮಾಮ ಪಬ್ಲಿಕೇಷನ್ಸ್
ವಡಪಳನಿ : ಮದ್ರಾಸು-26

# ಮತ್ತೆ ಈಗ

## ಹೊಸ ಮಾದರಿಯ

# ಟಾಯ್‌ಲೆಟ್ ಪೌಡರ್

## ದಿನವಿಡಿಯ ನಾವೀನ್ಯಕ್ಕೆ

**ಭಾ**ರತದಲ್ಲಿ ಮೊಟ್ಟಮೊದಲಿಗೆ, ಅತ್ಯುತ್ತಮವಾದ ಟಾಲಕಮ್ ಪೌಡರ್ ವಿಶ್ವವಿಖ್ಯಾತವಾದ ಈಚೀಚಿಯ ಹಾಗೂ ಕಡೆಯ **ಜಿ-೧೧** ⁂ ದೊಡನೆ ಕೂಡಿರುವದು. ಇದು ಚರ್ಮದೋಷಗಳಿಗೆ ಮತ್ತು ಬೆವರಿನ ದುರ್ಗಂಧಕ್ಕೆ ಕಾರಣವಾದ ಕ್ರಿಮಿಗಳನ್ನು ನಾಶಮಾಡುವ, ಕೆದರುವ ಗುಣವಿಲ್ಲದ ಒಂದೇ ಒಂದು **ಪ್ರಯೋಗ** ಸಿದ್ಧವಾದ ರಸಾಯನಿಕ ವಸ್ತು. ಈ ಅದ್ಭುತ ಪೌಡರ್ ಸೆಖೆಕುರುಗಳಿಂದ ಮತ್ತು ಟುವಾಲಿನ ಉಜ್ಜುವಿಕೆಯಿಂದುಂಟಾಗುವ ಹುಣ್ಣುಗಳಿಂದ (ಮಕ್ಕಳ ಬಾಬತು) ತೀವ್ರ ಮತ್ತು ಬಾಳುವ ಶಾಂತಿಯನ್ನೀಡುವುದು.

ಕೆಲಸ, ಆಟ, ವಿಹಾರ, ಕೂಟಿಗಳಿಗೆ ಹೋಗುವ ಮುಂಚೆ, ಈ ಸಂತವಿಸುವ ಮನೋಹರ ಸುವಾಸನೆಯ ಪೌಡರನ್ನು ನಿಮ್ಮ ಮೇಲೆ ಚಿಮುಕಿಸಿಕೊಳ್ಳಿರಿ. ಅಂದರೆ ನಿಮ್ಮಲ್ಲಿ ಹೆಚ್ಚು **ಆತ್ಮವಿಶ್ವಾಸ** ವುಂಟಾಗುವುದು. ನೀವು ಹೆಚ್ಚು **ಸ್ವೀಕಾರಾರ್ಹರಾಗುವಿರಿ.** ಬಟ್ಟೆಗಳಲ್ಲಿ ಚಿಮುಕಿಸಿದರೆ ಅದು ತಿಕ್ಕಾಟದ ಸೆಖೆಯನ್ನು ತಡೆಗಟ್ಟುವುದು.

Godrej ರಿಜಿಸ್ಟರ್ಡ್

**ಜಿ-೧೧ ದಿಂದ ಕೂಡಿರುವ**

## ಗೋದ್ರೆಜ್

# ಟಾಯ್‌ಲೆಟ್ ಪೌಡರ್

**ಸಿಂಥಾಲ್ ಸಾಬೂನು**
**ಹೆರ್ ಟಾನಿಕ್ (ಕೂದಲಿನ ಎಣ್ಣೆ)**
**ಶೇವಿಂಗ್‌ಸ್ಟಿಕ್ (ಕ್ಷೌರದ ಸಾಬೂನು)**
**ಇವು ಕೂಡ ಜಿ-೧೧ ರಿಂದ ಕೂಡಿರುವುವು**




⁂ ವೈಜ್ಞಾನಿಕ ಗ್ರಂಥ ವಿವರಣೆಯಿಂದಕೂಡಿದ ಜಿ-೧೧ (ಹೆಕ್ಸಾಕ್ಲೊರೊಫೀನ್) ಕಥೆಗೆ (ಅಂಗ್ರೇಜಿ) ಬರೆಯಿರಿ. ಗೋದ್ರೆಜ್ ಸೋಪ್ಸ್ ಪ್ರಾಯಿವೆಟ್ ಲಿಮಿಟೆಡ್ ಮುಂಬಯಿ ೧೧. ಭಾರತದಲ್ಲಿ ಉಪಯೋಗಿಸಲು ಗೋದ್ರೆಜರವರಿಂದ ಪೂರ್ಣಹಕ್ಕು ಕಾದಿಡಲ್ಪಟ್ಟಿದೆ.

ಕುಟುಂಬದೊಂದಿಗೆ ನೋಡಿ ಸಂತೋಷ ಪಡೆಯಿರಿ !

ವಿಜಯಾ ರವರ

# ಮಾಯಾಬಜಾರ್

ಡೈರೆಕ್ಷನ್.... ಕೆ.ವಿ.ರೆಡ್ಡಿ B.Sc (HONS)



ನಿರ್ಮಾಪಕರು... ನಾಗಿರೆಡ್ಡಿ & ಚಕ್ರಪಾಣಿ



# ಚಂದಮಾಮ

ಸಂಚಾಲಕರು : 'ಚಕ್ರಪಾಣಿ'

ಎಷ್ಟೋ ವರ್ಷ ತಪಸ್ಸು ಮಾಡಿದರೂ ತಪಸ್ಸು ಸಿದ್ಧಿಯಾಗುವುದಿಲ್ಲ.
ಆ ತಪಸ್ಸು ಏಕೆ ಸಿದ್ಧಿಸುವುದಿಲ್ಲ ಎಂಬುದೇನೋ ಆ ಮಹನೀಯನಿಗೆ
ಗೊತ್ತಿದೆ. ಗೊತ್ತಿದ್ದರೂ ಅದನ್ನು ನಿವಾರಿಸಿಕೊಳ್ಳುವುದಕ್ಕೆ ಸಾಧ್ಯ
ವಿರುವುದಿಲ್ಲ. ಅಂಥವನಿಗೆ ಒಂದು ಅಲ್ಪವೂ ಸೂಕ್ಷ್ಮವೂ ಆದ
ಕಾರ್ಯದಿಂದ ಮನೋದಾರ್ಢ್ಯವುಂಟಾಗಿ ಜಯಸಿದ್ಧಿ ಪಡೆಯುತ್ತಾನೆ.
ಅವನು ಮಾತ್ರವಲ್ಲ, ಒಂದು ಕುಟುಂಬವೇ ಜ್ಞಾನಪಡೆಯುತ್ತದೆ. ಈ
ಮಹತ್ವವಾದ ಘಟನೆಗಳಿಗೆ ಮುಖ್ಯ ಕಾರಣವಾಗಿ ಬರುವುದು
ಕ್ರೂರವಾದ ವಿಷ, ಹಾವಿನ ವಿಷ. ಒಂದು ಕುಟುಂಬದೊಳಗಿನ
ರಹಸ್ಯಗಳು ಎಷ್ಟು ಶಕ್ತಿಯುತವಾದುವೆಂದೂ ಇದರೊಂದಿಗೆ ಗೊತ್ತಾ
ಗುತ್ತದೆ. ಕುಟುಂಬದಲ್ಲಿ ಕಟ್ಟುಗೊಂಡಮೇಲೆ ಪ್ರಿಯಾಪ್ರಿಯಗಳನ್ನು
ಸರಿಸಮಾನವಾಗೆಣಿಸಿ ಕರ್ತವ್ಯಪಾಲಿಸುವುದೇ ಉತ್ತಮವೆಂದು ಆ
ಗೃಹಿಣಿ ತೋರಿಸಿ ಕೊಡುತ್ತಾಳೆ. ಈ ವಿಷಯುಗಳೆಲ್ಲಾ ಈ ಸಂಚಿಕೆ
ಯಲ್ಲಿರುವ 'ಸತ್ಯಪ್ರಮಾಣ' ವೆಂಬ ಜಾತಕಕಥೆಯಿಂದ ನಿಮಗೆ
ಗೊತ್ತಾಗುತ್ತದೆ. ಇದೂ, ಬೇತಾಳ ಕಥೆ ಮೊದಲಾದುವೂ ನೀತಿಕಥೆಗಳಾ
ದರೆ ನಿಮ್ಮನ್ನು ಆನಂದ ಕುತೂಹಲಗೊಳಿಸುವಂತೆ 'ಮೂವರು
ಮಾಂತ್ರಿಕ'ರಿದ್ದಾರೆ. ಮೊಲದ ಕಥೆಯೂ ನಿಮ್ಮನ್ನು ಬೆರಗುಗೊಳಿಸುವಂತೆ
ಚಮತ್ಕಾರವಾಗಿದೆ. ಈ ಎರಡು ಕಥೆಗಳ ಬಗ್ಗೆ ನಮಗೆ ಅನೇಕ ಓದುಗ
ರಿಂದ ಅಭಿನಂದನೆಗಳು ಬಂದಿವೆ. ಅದಕ್ಕಾಗಿ ಅವರೆಲ್ಲರಿಗೂ ನಮ್ಮ
ಕೃತಜ್ಞತೆಗಳನ್ನು ಈ ಮೂಲಕ ತಿಳಿಸುತ್ತೇವೆ.

ಸಂಪುಟ ೧೮ ಜೂನ್ ೧೯೬೭ ಸಂಚಿಕೆ ೬

# ಮುಖಚಿತ್ರ

ಧರ್ಮರಾಯನೂ, ಭೀಮನೂ, ದ್ರೌಪದಿಯೂ ಮಾರು ವೇಷಗಳನ್ನು ಧರಿಸಿ, ಹೆಸರು ಬದಲಾಯಿಸಿಕೊಂಡು ವಿರಾಟರಾಯನ ಬಳಿಗೆಹೋಗಿ ಕೆಲಸ ಸಂಪಾದಿಸಿಕೊಂಡ ನಂತರ, ಅರ್ಜುನನು ಬೃಹನ್ನಳೆಯ ರೂಪದಿಂಧ ವಿರಾಟನ ಆಸ್ಥಾನವನ್ನು ಪ್ರವೇಶ ಮಾಡಿದನು. ವಿರಾಟರಾಯನು ಆಶ್ಚರ್ಯಪಟ್ಟು "ನೀನು ಯಾರು ?" ಎಂದು ಕೇಳಿದನು.

"ಮಹಾರಾಜಾ, ನನ್ನ ಹೆಸರು ಬೃಹನ್ನಳೆ. ನಾಟ್ಯಕಲೆಯಲ್ಲಿ ನನಗೆ ಉತ್ತಮ ವಾದ ನೈಪುಣ್ಯತೆಯುಂಟು. ಚಿಕ್ಕವರಿಗೂ ದೊಡ್ಡವರಿಗೂ ನಾನು ನಾಟ್ಯಶಿಕ್ಷಣ ಕೊಡ ಬಲ್ಲೆ. ವೀಣೆ, ಮೃದಂಗ ಮೊದಲಾದ ವಾದ್ಯಗಳನ್ನು ಬಾರಿಸುವುದರಲ್ಲೂ ನಾನು ಪ್ರವೀಣೆ ಯಾಗಿದ್ದೇನೆ" ಎಂದು ಅರ್ಜುನ ಉತ್ತರಿಸಿದ. ವಿರಾಟರಾಜನು ಈ ಮಾತನ್ನು ನಂಬದೆ, "ಇದು ಏನು? ನಿನ್ನನ್ನು ನೋಡಿದರೆ ಧನುರ್ಬಾಣಗಳನ್ನು ಧರಿಸತಕ್ಕ ವ್ಯಕ್ತಿಯಾಗಿ ಕಾಣುತ್ತೀ. ಸ್ತ್ರೀಯರಿಗೆ ನಾಟ್ಯಕಲಿಸುವ ಗತಿನಿನಗೇನುಬಂತು? ಧನುರ್ಬಾಣಗಳನ್ನು ಧರಿಸಿ ನನಗೆ ಒತ್ತಾಸೆಯಾಗಿರು." ಎಂದು ಹೇಳಿ ಧನುರ್ಬಾಣಗಳನ್ನು ತರಿಸಿ ಅರ್ಜುನನ ಇದಿರಿನಲ್ಲಿ ಇಡಿಸಿದನು.

ಅರ್ಜುನನು ಅವುಗಳನ್ನುಕಂಡು ಭಯಪಟ್ಟವನಂತೆ ನಟಿಸುತ್ತ "ರಾಜಾ, ಇವು ಗಳನ್ನು ಹೇಗೆ ಹಿಡಿಯಬೇಕೋ ಗೊತ್ತಿಲ್ಲವಲ್ಲಾ. ನಾನು ನಿಜಕ್ಕು ಬೃಹನ್ನಳೆ. ನನ್ನ ಮೇಲೆ ಅನುಗ್ರಹಿಸಿ ನನ್ನನ್ನು ನಾಟ್ಯಕ್ಕೆ ಇಟ್ಟು ಕೊಳ್ಳಿ" ಎಂದು ಬಿನ್ನವಿಸಿಕೊಂಡ.

ಆಗ ವಿರಾಟನು ತನ್ನ ಕುಮಾರಿ ಉತ್ತರೆಯನ್ನು ಕರೆಯಿಸಿ, "ತಾಯಿ, ಈಕೆಯ ಹೆಸರು ಬೃಹನ್ನಳೆ. ಇಂದಿನಿಂದ ಇವಳು ನಿನಗೆ ನಾಟ್ಯವನ್ನು ಕಲಿಸುತ್ತ ನಿನಗೆ ಗೆಳತಿ ಯಾಗಿರುತ್ತಾಳೆ" ಎಂದ. ಅರ್ಜುನನು ಉತ್ತರೆಯೊಂದಿಗೆ ಅಂತಃಪುರಕ್ಕೆ ಹೋಗಿ, ನೃತ್ಯಶಾಲೆಯಲ್ಲಿ ಪ್ರತಿ ದಿನವೂ ಉತ್ತರೆಗೆ ನೃತ್ಯಕಲಿಸ ತೊಡಗಿದನು.

ಅನಂತರ ವಿರಾಟರಾಯನು ಅಶ್ವಶಾಲೆಗೆ ಹೋದಾಗ ನಕುಲನು ಅಲ್ಲಿಗೆಬಂದು ಕುದುರೆಗಳ ಪರೀಕ್ಷೆಗೆ ತೊಡಗಿದನು. "ನಿನಗೆ ಕುದುರೆಗಳ ವಿಷಯ ಗೊತ್ತೇ?" ಎಂದು ವಿರಾಟನು ಕೇಳಿದ. "ಗೊತ್ತು; ಅಶ್ವಚಿಕಿತ್ಸೆ, ಕಾಡು ಕುದುರೆಗಳನ್ನು ಸಾಧು ಮಾಡುವ ವಿದ್ಯೆ ಎಲ್ಲಾ ನನಗೆ ಗೊತ್ತಿದೆ. ದಯಮಾಡಿ ನನ್ನನ್ನು ಕೆಲಸಕ್ಕಿಟ್ಟುಕೊಳ್ಳಿ" ಎಂದ ನಕುಲ. ರಾಜ ಅವನನ್ನು ಅಶ್ವಪಾಲಕನನ್ನಾಗಿ ಇಟ್ಟುಕೊಂಡ.

ಅದೇದಿನ ಸಹದೇವನೂ ವಿರಾಟರಾಯನ ಬಳಿಯಲ್ಲಿ ಗೋಪಾಲಕನಾಗಿ ಉದ್ಯೋಗ ಸಂಪಾದಿಸಿಕೊಂಡ. ಈ ವಿಧವಾಗಿ ಪಂಚಪಾಂಡವರೂ, ದ್ರೌಪದಿಯೂ ತಮ್ಮ ಅಜ್ಞಾತವಾಸವನ್ನು ಪ್ರಾರಂಭಿಸಿದರು.




ಬ್ರಹ್ಮದತ್ತನು ಕಾಶೀರಾಜ್ಯವನ್ನು ಆಳುತ್ತಿದ್ದ ಕಾಲದಲ್ಲಿ ಬೋಧಿಸತ್ವನು ಕೃಷ್ಣದ್ವೈಪಾಯನನೆಂಬ ಧನಿಕ ಬ್ರಾಹ್ಮಣನಾಗಿ ಕೌಶಾಂಬಿ ನಗರದಲ್ಲಿ ಜನಿಸಿದನು.

ಲೌಕಿಕ ವಾಂಛೆಗಳಿಂದುಂಟಾಗುವ ಅನರ್ಥಗಳನ್ನು ಗ್ರಹಿಸಿ, ಆತನು ತನ್ನ ಸರ್ವ ಸಂಪತ್ತನ್ನು ದಾನ ಧರ್ಮಗಳಿಗೆ ವಿನಿಯೋಗಿಸಿ, ಸನ್ಯಾಸಾಶ್ರಮವನ್ನು ಸ್ವೀಕರಿಸಿ ಐವತ್ತು ವರ್ಷಗಳ ಕಾಲ ಹಿಮಾಲಯ ಪರ್ವತದ ತಪ್ಪಲಲ್ಲಿ ಕುಳಿತು ತಪಸ್ಸು ಮಾಡಿದನು. ಅಷ್ಟುಕಾಲ ಸೊಪ್ಪು ಸದೆ ತಿಂದು ಶರೀರವನ್ನು ಒಣಗಿಸಿ ಬಹಳ ಸಾಧನೆಯಿಂದ ಸಾಗಿಸಿದ ಈ ತಪಸ್ಸು ಆತನಿಗೆ ಸಿದ್ಧಿಸಲಿಲ್ಲ.

ತದನಂತರ ಕೃಷ್ಣದ್ವೈಪಾಯನನು ಹಿಮಾಲಯಾ ಪರ್ವತದ ತಪ್ಪಲನ್ನು ಬಿಟ್ಟು, ತೀರ್ಥಯಾತ್ರೆ ಮಾಡುತ್ತಾ ಕಾಲಕ್ರಮೇಣ ಕಾಶಿರಾಜ್ಯಕ್ಕೆ ಬಂದನು.

ಹೀಗೆ ಸಂಚರಿಸುತ್ತಿರುವಾಗ ಒಂದು ಗ್ರಾಮದಲ್ಲಿ ಆತನ ಬಾಲ್ಯಮಿತ್ರನಾದ ಮಾಂಡವ್ಯನೆಂಬಾತನು ನೋಡಿ ತನ್ನ ಮನೆಗೆ ಕರೆದುಕೊಂಡು ಹೋಗಿ, ಆತನಿಗೆ ಆತಿಥ್ಯವನ್ನು ಕೊಟ್ಟನು.

ಮಾಂಡವ್ಯನು ಕೃಷ್ಣದ್ವೈಪಾಯನನ್ನು ತನ್ನ ಬಳಿಯೇ ಇರಬೇಕೆಂದು ಕೋರಿದನು. ಕೃಷ್ಣದ್ವೈಪಾಯನನಿಗಾಗಿ ಒಂದು ಪರ್ಣಕುಟೀರವನ್ನು ಕಟ್ಟಿಸಿ, ಆತನ ಆವಶ್ಯಕತೆಗಳನ್ನು ತಾನೇ ಸ್ವತಃ ಇದ್ದು ಮಾಡಿಕೊಳ್ಳುತ್ತಿದ್ದನು.

ಒಂದು ದಿನ ಮಾಂಡವ್ಯನ ಮಗ ಯಜ್ಞದತ್ತನು ಚೆಂಡಾಡುತ್ತಿರಲು, ಚೆಂಡು ಅಲ್ಲಿದ್ದ ಒಂದು ಹುತ್ತದಲ್ಲಿ ಬಿತ್ತು. ಯಜ್ಞದತ್ತನು ಚೆಂಡು ತೆಗೆದುಕೊಳ್ಳಲು ಹುತ್ತದಲ್ಲಿ ಕೈ ಹಾಕಿದನು. ಕೂಡಲೇ ಅಲ್ಲಿದ್ದ ಹಾವು ಅವನ ಕೈಯನ್ನು ಕಚ್ಚಿತು. ಹಾವಿನ ವಿಷ ಬೇಗ ದೇಹದಾದ್ಯಂತ ಹರಡಿ, ಯಜ್ಞದತ್ತನು ಸ್ಮೃತಿತಪ್ಪಿ ಕೆಳಗೆ ಬಿದ್ದುಬಿಟ್ಟನು.

ಯಜ್ಞದತ್ತನು ಪ್ರಜ್ಞೆತಪ್ಪಿ ಬಿದ್ದಿರುವುದನ್ನು ಮಾಂಡವ್ಯ ಮತ್ತು ಆತನ ಪತ್ನಿ ನೋಡಿದರು. ಮಗನನ್ನು ಬದುಕಿಸಲು ಒಂದೇ ಒಂದು ಆಶೆ ಮಾತ್ರ ಅವರಿಗೆ ತೋರಿತು. ಮಾಂಡವ್ಯನು



ಕೂಡಲೇ ಮಗನನ್ನು ಎತ್ತಿಕೊಂಡು, ಹೆಂಡತಿಯೊಂದಿಗೆ ಕೃಷ್ಣದ್ವೈಪಾಯನನ ಬಳಿಗೆ ಬಂದು, ಆತನ ಪಾದಗಳಮುಂದೆ ಮಗನನ್ನು ಮಲಗಿಸಿದನು.

"ಸ್ವಾಮಿ, ನಮ್ಮ ಮಗನಿಗೆ ಹಾವು ಕಚ್ಚಿತು. ನಿಮ್ಮ ತಪೋಬಲದಿಂದ ನಮ್ಮ ಮಗನನ್ನು ಬದುಕಿಸಿಕೊಡಿ. ನಮಗೆ ಪುತ್ರಭಿಕ್ಷೆನೀಡಿ" ಎಂದು ದಂಪತಿಗಳು ಪ್ರಾರ್ಥಿಸಿದರು.

ಕೃಷ್ಣದ್ವೈಪಾಯನಿಗೆ ಏನು ಮಾಡಲೂ ತೋಚಲಿಲ್ಲ. "ನಿಮ್ಮದೊಂದು ಭ್ರಮೆ. ನನ್ನಲ್ಲಿ ಯಾವ ವಿಶೇಷ ಶಕ್ತಿಯೂ ಇಲ್ಲ. ನಾನು ಐವತ್ತು ವರ್ಷ ತಪಸ್ಸು ಮಾಡಿದ್ದರೂ ಸಹ ನನಗೆ ಅದು ಸಿದ್ಧಿಸಲಿಲ್ಲ. ಕನಿಷ್ಟಪಕ್ಷ ನನಗೆ ವೈದ್ಯಚಿಕಿತ್ಸೆಯೂ ಬರುವುದಿಲ್ಲ. ನನ್ನನ್ನೇಕೆ ನಂಬುವಿರಿ? ನಾನು ಹೇಗೆ ನಿಮಗೆ ಸಹಾಯ ಮಾಡಲಿ?" ಎಂದು ತೀರಾ ಹತಾಶನಾಗಿ ಆ ದಂಪತಿಗಳಿಗೆ ಹೇಳಿದ.

"ತಪಸ್ಸು ಸಿದ್ಧಿಸದಿದ್ದರೂ ಅಷ್ಟು ವರ್ಷ ಕಾಲ ಮಾಡಿದ ತಪಸ್ಸಿಗೆ ಕಿಂಚಿತ್ತಾದರೂ ಫಲ ವಿರಲೇಬೇಕು. ನನಗೆ ನಿಮ್ಮ ತಪಸ್ಸಿನಲ್ಲಿ ತುಂಬಾ ನಂಬುಗೆ ಯಿದೆ. ನೀವು ಸತ್ಯಪ್ರಮಾಣ ಮಾಡಿ, ಹುಡುಗ ಬದುಕಿಕೊಳ್ಳುತ್ತಾನೆ" ಎಂದ ಮಾಂಡವ್ಯ. ಕೃಷ್ಣದ್ವೈಪಾಯನನು ಇದಕ್ಕೆ ಸಮ್ಮತಿಸಿ ಈ ಕೆಳಗಿನ ಶ್ಲೋಕವನ್ನು ಹೇಳಿ ಸತ್ಯಪ್ರಮಾಣ ಮಾಡಿದನು.

ಸತ್ತಾಹಂ ಏವಾಹಂ ಪ್ರಸನ್ನ ಚಿತ್ತೋ
ಪುಂಜ್ಞತ್ಥಿಕೊ ಅಚರಿಂ ಬ್ರಹ್ಮಚರಿಯಂ



ಅಥಾಪರಂ ಯಂ ಚರಿತಂ ಮಮಯಿದಂ
ವಸ್ಸಾನಿ ಪಂಜ್ಞಾಸ ಸಮಾಧಿಕಾನಿ
ಅಕಾಮಕೊ ವಾಹಿಂ ಅಹಂ ಚರಾಮಿ
ಏತೇನ ಸಚ್ಚೇನ ಸವತ್ಥಿ ಹೋತು
ಹತಂ ವಿಸಂ ಜೀವತು ಯಂಜ್ಞದತ್ತೋ

[ನಾನು ಪುಣ್ಯವನ್ನು ಕೋರಿ ಒಂದು ವಾರ ಪರ್ಯಂತ ನಿರ್ಮಲ ಚಿತ್ತದಿಂದ ಬ್ರಹ್ಮಚರ್ಯ ವ್ರತವನ್ನು ಅವಲಂಬಿಸಿದ್ದೇನೆ. ತರುವಾಯ ನಾನು ಐವತ್ತು ವರ್ಷಗಳ ಕಾಲ ಬಹಳ ಕಠಿನವಾದ ತಪಸ್ಸೇನೋ ಮಾಡಿದೆ. ಆದರೆ ಅದು ಚಿತ್ತ ಶುದ್ಧಿಯಿಂದ ಮಾಡಿದುದಲ್ಲ. ನಾನು ಮಾಡುವ ಈ ಸತ್ಯಪ್ರಮಾಣದ ಫಲವಾಗಿ ವಿಷವು ತೊಲಗಿ, ಯಜ್ಞದತ್ತನು ಪೂರ್ಣಾಯುವಾಗಲಿ.]







ನಚಾಪಿ ಮೇ ಅಪ್ಪಿಯಂ ಅವೇದುಂ
ಬಹುಸ್ಸುತಾ ಸಮಣಾ ಬ್ರಾಹ್ಮಣಾಚ
ಅಕಾಮಕೊ ವಾಹಿ ಅಹಂ ದದಾಮಿ
ಏತೇನ ಸಚ್ಚೇನ ಸುವತ್ಥಿ ಹೋತು
ಹತಂ ವಿಸಂ ಜೀವತು ಯಂಜ್ಞದತ್ತೋ

[ನಾನು ಅತಿಥಿ ಸತ್ಕಾರವೆಸಗಿದ್ದರೂ ಅದು ಪ್ರೀತಿಯಿಂದಿಲ್ಲ. ಜ್ಞಾನಿಗಳಾದ ಶರಣರೂ, ಬ್ರಾಹ್ಮಣರೂ ವಿಮನಸ್ಕನಾಗಿ ನಾನು ಅತಿಥಿ ಸತ್ಕಾರವನ್ನು ಮಾಡಿದೆನೆಂದು ಗ್ರಹಿಸಲಿಲ್ಲ. ನಾನು ದಾನ ಧರ್ಮಗಳನ್ನು ಅಯಿಷ್ಟತೆಯಿಂದ ಮಾಡಿದೆ. ನಾನು ಮಾಡುವ ಈ ಸತ್ಯಪ್ರಮಾಣದ ಫಲವಾಗಿ ವಿಷವು ತೊಲಗಿ ಯಜ್ಞದತ್ತನು ಪೂರ್ಣಾಯುವಾಗಲಿ.]

ಮಾಂಡವ್ಯನು ಈ ವಿಧವಾಗಿ ಸತ್ಯಪ್ರಮಾಣ ಮಾಡಿದ ಕೂಡಲೇ ಯಜ್ಞದತ್ತನ ಬೆನ್ನಿನಿಂದ ಮತ್ತಿಷ್ಟು ವಿಷ ಹೊರಗೆ ಬಂದು ನೆಲದಲ್ಲಿ ಇಂಗಿಹೋಯಿತು.

ಕೂಡಲೇ ಹುಡುಗನ ವಕ್ಷಸ್ಥಳದಿಂದ ಸ್ವಲ್ಪ ವಿಷ ಹೊರಬಂದು ನೆಲದಲ್ಲಿ ಇಂಗಿಹೋಯಿತು. ಅವನು ಕಣ್ಣು ತೆರೆದು ತಂದೆ ತಾಯಿಗಳ ಕಡೆ ನೋಡಿ 'ಅಮ್ಮಾ', ಎಂದು ಕನವರಿಸಿ, ಮತ್ತೆ ಮೂರ್ಛಿತನಾದನು.

"ನೋಡಿದೆಯಾ, ಹಾವಿನ ವಿಷವನ್ನು ಪೂರ್ತಿ ಹೊರಗೆಳೆಯಲು ನನ್ನಿಂದ ಸಾಧ್ಯವಾಗಲಿಲ್ಲ. ನೀನು ಸಹ ನಿನ್ನ ವಿಷಯವಾಗಿ ಸತ್ಯಪ್ರಮಾಣವನ್ನು ಮಾಡು. ಏನಾದರೂ ಫಲವಿರಬೇಕು" ಎಂದು ಕೃಷ್ಣದ್ವೈಪಾಯನನು ಮಾಂಡವ್ಯನೊಂದಿಗೆ ಹೇಳಿದನು. ಮಾಂಡವ್ಯನು ಸಮ್ಮತಿಸಿ, ಈ ರೀತಿ ಸತ್ಯಪ್ರಮಾಣ ಮಾಡಿದ:

ಯಸ್ಮಾ ದಾನಂ ನ ಅಭಿನಂದಿಂ ಕದಾಚಿ
ದಿನವಾನಾಹಂ ಅತಿಥಿಂ ವಾ ಸಕಾಲೇ

ಹುಡುಗನೆದ್ದು ಕುಳಿತುಕೊಂಡನು. ಆದರೆ ನಿಂತುಕೊಳ್ಳುವಷ್ಟು ತ್ರಾಣ ವಿರಲಿಲ್ಲ.

ಆಗ ಮಾಂಡವ್ಯನು ತನ್ನ ಹೆಂಡತಿಯಕಡೆ ನೋಡಿ, "ಸತ್ಯಪ್ರಮಾಣಕ್ಕೆ ಫಲವಿದೆಯೆಂದು ತಿಳಿಯಿತು. ನೀನೂ ಸತ್ಯಪ್ರಮಾಣ ಮಾಡಿದರೆ ಹುಡುಗ ಎಂದಿನಂತೆ ಎದ್ದು ತಿರುಗಾಡುವನು" ಎಂದನು.

"ನಾನು ಪ್ರಕಟಮಾಡುವಂತಹ ಸತ್ಯವೂ ಇದೆ. ಆದರೆ ಅದನ್ನು ನಿಮ್ಮ ಮುಂದೆ ಹೇಳಲು ಸಾಧ್ಯವಿಲ್ಲ" ಎಂದಳು ಮಾಂಡವ್ಯನ ಹೆಂಡತಿ





ಸಂದೇಹಪಡುತ್ತಾ. "ಹುಚ್ಚಳೇ, ಸಂದೇಹ ಪಡುವೆಯೇಕೆ? ನಮಗೆ ಮಗುವಿಗಿಂತಲೂ ಹೆಚ್ಚೇನಿದೆ. ಯಾವ ಕಳಂಕವನ್ನೂ ಹಚ್ಚಿ ಕೊಳ್ಳದೆ ಧೈರ್ಯದಿಂದ ಸತ್ಯಪ್ರಮಾಣ ಮಾಡು" ಎಂದು ಹೆಂಡತಿಯನ್ನು ಪ್ರೋತ್ಸಾಹಿಸಿದನು. ಆಗ ಆಕೆ ಒಪ್ಪಿಕೊಂಡು ಈ ರೀತಿಯಾಗಿ ತನ್ನ ಸತ್ಯಪ್ರಮಾಣವನ್ನು ಹೇಳಿದಳು:

ಅಸೋವಿಸೋ ತಾತ ಪಹೂತ ತೇಜೋ
ಯಿ ತಂ ಅದಟ್ಟಿ ಪತರಾ ಇದಚ್ಚಿ
ತಸ್ಮಿಂ ಚ ಮೇ ಅಪ್ಪಿಯತಾಯ ಅಜ್ಜ
ಪಿತರಿ ಚತೇ ನತ್ಥಿ ಕೋಚಿ ವಿಸೆಸೋ
ಏತೇನ ಸಚ್ಚೇನ ಸುವತ್ಥಿ ಹೋತು
ಹತಂ ವಿಸಂ ಜೀವತು ಯಂಜ್ಞದತ್ತೋ

[ಮಗೂ, ಇಂದು ನಿನ್ನನ್ನು ಕಚ್ಚಿರುವ ವಿಷ ಸರ್ಪವನ್ನು ಕಂಡರೆಷ್ಟು ನನಗೆ ಅಸಹ್ಯವೋ ಅಷ್ಟೇ ಅಸಹ್ಯವಾಗುತ್ತಿದೆ ನಿಮ್ಮ ತಂದೆಯನ್ನು ಕಂಡರೆ. ನನಗೆ ಇವರಿಬ್ಬರಲ್ಲಿ ಯಾವ ಬೇಧವೇ ಇಲ್ಲ. ಈಗ ನಾನು ಮಾಡಿದ ಸತ್ಯಪ್ರಮಾಣದ ಫಲವಾಗಿ ವಿಷ ತೊಲಗಿ ಯಜ್ಞದತ್ತನು ಪೂರ್ಣಾಯುವಾಗಲಿ.]

ಈ ರೀತಿ ಸತ್ಯಪ್ರಮಾಣ ಮಾಡಲು ಯಜ್ಞದತ್ತನ ಶರೀರದಿಂದ ವಿಷ ಸಂಪೂರ್ಣವಾಗಿ ಹೊರಗೆ ಬಂದು ನೆಲದಲ್ಲಿ ಇಂಗಿಹೋಯಿತು. ಅವನು ಉತ್ಸಾಹದಿಂದ ಎದ್ದು ಎಂದಿನಂತೆ ಆಟವಾಡಿಕೊಳ್ಳುತ್ತಿದ್ದನು.

ಮಾಂಡವ್ಯನು ಕೃಷ್ಣದ್ವೈಪಾಯನನ ಕಡೆ ನೋಡಿ, "ಸ್ವಾಮಿ, ತಾವು ಅತ್ಯುತ್ತಮವಾದ ತಾಪಸಜೀವನವನ್ನು ಸ್ವೀಕರಿಸಿಯೂ ಸಹ ಅದನ್ನು ಇಷ್ಟವಿಲ್ಲದೆ ಸಾಗಿಸಲು ಕಾರಣ ವೇನು?" ಎಂದನು.

"ಅದಕ್ಕೊಂದು ಕಾರಣವಿದೆ. ಒಂದುಸಾರಿ ಸನ್ಯಾಸಾಶ್ರಮವನ್ನು ಸ್ವೀಕರಿಸಿ ದಾತನು ಮತ್ತೆ ಸಂಸಾರದಲ್ಲಿ ಕಾಲಿಟ್ಟರೆ ಎಲ್ಲರೂ ಅವಹೇಳನ ಮಾಡುತ್ತಾರೆ. ಜನ ನಿಂದಿಸುತ್ತಾರೆ. ಅದರಿಂದ ಆ ಜೀವನ ನನಗಿಷ್ಟವಿಲ್ಲದಿದ್ದರೂ, ಪ್ರತಿಯೊಬ್ಬರೂ ನನ್ನನ್ನು ಗೌರವ ಮರ್ಯಾದೆಗಳಿಂದ ಕಾಣಲು ನಾನು ತಪಸ್ವಿಯಾಗಿಯೇ ಇದ್ದುಬಿಟ್ಟಿದ್ದೇನೆ. ಇದೇ ಕಾರಣ. ಮತ್ತೆ ನೀನು ಅತಿಥಿ ಅಭ್ಯಾಗತರಿಗೆ ಧಾರಾಳವಾಗಿ ಆತಿಥ್ಯವನ್ನು ಕೊಡುವೆಯಲ್ಲಾ? ಏಕೆ? ವಿಮುಖತೆಯಿಂದ ಅತಿಥಿ ಸತ್ಕಾರಮಾಡಲು ಕಾರಣ

ವೇನು?" ಎಂದು ಕೇಳಿದನು. "ನನ್ನ ಮಾತಾ ಪಿತರು ಮಹಾ ದಾನಿಗಳೆಂದು ಹೆಸರುಪಡೆದಿದ್ದಾರೆ. ಅಂತಲೇ ನಾನುಕೂಡ ಅವರ ಮಾರ್ಗವನ್ನು ಅನುಸರಿಸಬೇಕಾಗಿ ಬಂದಿತು. ಅವರ ಕೀರ್ತಿಗೆ ಕಳಂಕ ತಂದೆನೆಂದು ಜನರಾಡಿಕೊಳ್ಳದಿರಲು ನಾನು ಈ ದಾನ ಧರ್ಮಗಳನ್ನು ಮಾಡುತ್ತಿರುವೆನು. ನನಗೆ ಮನಃಪೂರ್ವಕ ದಾನ ಬುದ್ಧಿಯಿಲ್ಲ. ನನಗೆ ದಾನಧರ್ಮಗಳಲ್ಲಿ ಅಭಿಮಾನವಿಲ್ಲ"

ಎಂದು ಹೇಳಿ ಮಾಂಡವ್ಯನು ತನ್ನ ಹೆಂಡತಿಯನ್ನು ಕುರಿತು, "ನೀನು ಬಾಲ್ಯದಲ್ಲೇ ನನ್ನ ಹೆಂಡತಿಯಾಗಿ ನನ್ನ ಮನೆಗೆ ಬಂದೆ. ಇಷ್ಟು ವರ್ಷ ನನ್ನೊಂದಿಗೆ ಸಂಸಾರ ಮಾಡಿದೆ. ಆದರೆ ನನ್ನಮೇಲೆ ಪ್ರೇಮಾಭಿಮಾನಗಳಿಲ್ಲದೆ ಮಾಡಿದ ಈ ಸಂಸಾರದಿಂದ ನಿನಗೆ ತುಂಬಾ ಬೇಸರವಾಗಿರಬೇಕಲ್ಲವೆ? ಇದನ್ನು ನೀನು ಹೊರಗೆಡವದೆ ಏಕೆ ಸಹಿಸಿದೆ?" ಎಂದು ಕೇಳಿದ.

ಆಕೆ ಅಂದಳು: "ನಮ್ಮ ವಂಶದಲ್ಲಿ ಸ್ತ್ರೀ ತನ್ನ ಗಂಡನೊಂದಿಗೆ ಸಂಸಾರ ಮಾಡುವುದು ಒಂದು ವಿಧಿ, ಕರ್ತವ್ಯ. ಅದರಿಂದಲೇ ನಾನು ಈ ಬಾಳನ್ನೇ ಸಹಿಸಿಕೊಂಡು ಸುಮ್ಮನಿದ್ದೆ. ನಾನು ನಿಮ್ಮನ್ನು ಬಿಟ್ಟು, ಬೇರೊಬ್ಬನನ್ನು ವಿವಾಹವಾಗಿದ್ದರೆ ಜನ ನನ್ನನ್ನು ಕುಲಟೆಯೆಂದು ಭಾವಿಸುತ್ತಿದ್ದರು. ನಮ್ಮ ಮಗುವಿನ ಕ್ಷೇಮ ಕೋರಿನಾನಿಂದು ಈ ವಿಷಯವನ್ನು ಬಯಲುಮಾಡಬೇಕಾಯಿತು."

"ನಿಜ ನುಡಿದುದರಿಂದ ನಾನು ನಿನ್ನನ್ನು ಅನ್ಯಥಾ ಭಾವಿಸುವುದಿಲ್ಲ. ಇನ್ನುಮುಂದೆ ನಿನ್ನನ್ನು ಪ್ರೀತ್ಯಾದರಗಳಿಂದ ನೋಡಿಕೊಳ್ಳುವೆನೆಂದು ಪ್ರಮಾಣಪೂರ್ವಕವಾಗಿ ಹೇಳುತ್ತಿದ್ದೇನೆ. ನಿನ್ನ ಬೇಸರವನ್ನು ಹೋಗಲಾಡಿಸಲು ನನ್ನಿಂದಾದಷ್ಟು ಪ್ರಯತ್ನ ಮಾಡುತ್ತೇನೆ" ಎಂದ ಮಾಂಡವ್ಯ.

"ಕರ್ತವ್ಯವು ಸಿದ್ಧಿಸಬೇಕಾದರೆ ಏನು ಮಾಡಬೇಕೆಂದು ಈಗ ತಿಳಿಯಿತು. ನೀನು ಮನಸ್ಫೂರ್ತಿಯಾಗಿ ದಾನ ಮಾಡು. ನಾನೂ ತಪಸ್ಸನ್ನು ಮನಸ್ಫೂರ್ತಿಯಾಗಿ ಮಾಡುವೆನು. ಇನ್ನು ಇಲ್ಲಿರುವುದಿಲ್ಲ" ಎಂದು ಹೇಳಿ ಕೃಷ್ಣದ್ವೈಪಾಯನನು ಮಾಂಡವ್ಯನಿಂದ ಅಪ್ಪಣೆ ಪಡೆದು ತನ್ನ ದಾರಿ ತಾನು ಹಿಡಿದನು.






## 5

[ಪದ್ಮಪಾದನು ಪಿಂಗಳನನ್ನು ಭಲ್ಲೂಕಕೇತನ ಮಾಯೆಗೆ ಸಿಲುಕಿಸದಂತೆ ರಕ್ಷಿಸಿದ ನಂತರ ಇಬ್ಬರೂ ಭಲ್ಲೂಕಪರ್ವತಗಳಿಗೆ ಹೊರಟರು. ದಾರಿಯಲ್ಲಿ ಹೊಗೆಯ ರೂಪದಲ್ಲಿ ಸುಳಿ ಸುಳಿಯಾಗಿ ತಿರುಗುತ್ತಿದ್ದ ಪಿಶಾಚಿಗಳು ಕಾಣಿಸಿದುವು. ಮೊಸಳೆಯ ರೂಪದಲ್ಲಿದ್ದ ಮಹಾಮಾಯನ ಶಿಷ್ಯರು ಪದ್ಮಪಾದನಿಗೆ ಸಹಾಯಮಾಡಲು ಅಂಗೀಕರಿಸಿ ಅದೃಶ್ಯರಾದರು.]

ಮಹಾಮಾಯನ ಶಿಷ್ಯರಿಬ್ಬರೂ ಅದೃಶ್ಯರಾದ ಕೂಡಲೇ ಪಿಂಗಳನು ಆಶ್ಚರ್ಯದಿಂದ ಪದ್ಮಪಾದನ ಕಡೆ ನೋಡಿ,

"ಪದ್ಮಪಾದ, ಅವರು ಮತ್ತೆ ಮೊಸಳೆಯ ರೂಪ ಪಡೆದು ನದಿಯನ್ನು ಪ್ರವೇಶಿಸಲಿಲ್ಲವಷ್ಟೆ?" ಎಂದು ಕೇಳಿದನು.

"ಮೊಸಳೆಯ ರೂಪದಲ್ಲೇ?" ಎಂದು ಪದ್ಮಪಾದನು ಬೆಚ್ಚಿಬಿದ್ದನು. ತಕ್ಷಣ ಚೇತರಿಸಿಕೊಂಡು, ನಸುನಗುತ್ತಾ,

"ಪಿಂಗಳಾ, ಅವರು ಮತ್ತೆ ಮೊಸಳೆಯ ರೂಪ ತಾಳಿದ್ದರೆ ಇಷ್ಟರವರೆಗೆ ಆದುದೇನೂ ಇಲ್ಲ. ಕಥೆ ಮೊದಲಿನ ಸ್ಥಿತಿಗೇ ಬರುತ್ತದೆ. ಅವರನ್ನು ವಶಪಡಿಸಿಕೊಳ್ಳ ಹೋಗಿ ಬಲಶಾಲಿಗಳಾದ ನನ್ನ ಇಬ್ಬರು ಸಹೋದರರು ಆಹುತಿಯಾದ ವಿಷಯ ನಿನಗೆ ತಿಳಿದಿದೆ. ನಾನೂಸಹ ಏನೋ ಪುಣ್ಯದಿಂದ ಗತ ಪ್ರಾಣದೊಂದಿಗೆ ಹೊರಬಿದ್ದೆ" ಎಂದನು.

"ಹಾಗಾದರೆ ಅವರೀಗ ಎಲ್ಲಿಗೆ ಹೋಗಿದ್ದಾರೆ" ಪಿಂಗಳನು ಪ್ರಶ್ನಿಸಿದ.

"ಅವರು ಎಲ್ಲಿಗೆ, ಯಾವ ರೂಪದಲ್ಲಿ ಹೋದರೆಂಬುದು ಈಗ ಮುಖ್ಯವಲ್ಲ. ನಾವು ಹೇಗಾದರೂ ನದಿ ಗರ್ಭದಲ್ಲಿರುವ ಪಾಳು



ದೇಗುಲವನ್ನು ಪ್ರವೇಶಿಸಬೇಕು. ಆ ದೇಗುಲದ ಐದು ದ್ವಾರಗಳು ತೆರೆದುಕೊಂಡರೆ ಮಾತ್ರ ನಾವು ಮಹಾಮಾಯನ ಸಮಾಧಿಯಿರುವ ಕೋಣೆಯನ್ನು ಸೇರಬಲ್ಲೆವು. ಆ ಕೋಣೆಯನ್ನು ಪ್ರವೇಶಿಸಲು ಅವರು ನಮಗೆ ಸಹಾಯ ಮಾಡುವರು" ಎಂದ ಪದ್ಮಪಾದ.

"ನಾನು ಹೇಳಿಕೊಳ್ಳುವಂತಹ ಈಜುಕಾರನಲ್ಲ. ಹೇಗೆ ಮತ್ತೆ ದೇವಾಲಯವನ್ನು ಸೇರಲಿ?" ಎಂದು ಯೋಚನೆಮಾಡುತ್ತಾ ಮತ್ತೊಂದು ಪ್ರಶ್ನೆ ಪಿಂಗಳನಿಂದ ಹೊರಟಿತು.

ಇದನ್ನು ಕೇಳಿ ಪದ್ಮಪಾದನು ಮುಗುಳುನಗೆ ಬೀರಿ, "ಪಿಂಗಳಾ, ನಿನಗೆ ಈಜಲು ಬರದಿದ್ದರೂ ಎದೆಗಾರಿಕೆ ಇದ್ದರೆ ಸಾಕು. ಈ ನದಿಯಲ್ಲಿ ಒಂದು ತೊಟ್ಟೂ ನೀರಿರದಂತೆ ಪ್ರಯತ್ನಿಸುವೆನು. ಈ ಪ್ರಯತ್ನದಲ್ಲಿ ನಮಗೆ ಮಹಾಮಾಯನ ಶಿಷ್ಯರು ನೆರವು ನೀಡುವರು" ಎಂದು ಭರವಸೆ ಕೊಟ್ಟ ಪದ್ಮಪಾದ.

"ಏನು! ಈ ನದಿಯಲ್ಲಿ ಒಂದು ತೊಟ್ಟೂ ನೀರಿಲ್ಲದಂತೆ ಮಾಡುವಿಯಾ?" ಪಿಂಗಳನು ಆಶ್ಚರ್ಯದಿಂದ ಕೇಳಿದ.

"ಹೌದು. ಹಾಗೆ ಮಾಡಿದಾಗಲೇ ನಮ್ಮ ಕಾರ್ಯ ನೆರವೇರುವುದು. ನಾನೀಗಲೇ ಮಂತ್ರ ನಿಷ್ಠೆಯಲ್ಲಿ ಕುಳಿತುಕೊಳ್ಳುವೆನು. ಮಹಾಮಾಯನ ಸ್ವಾಧೀನದಲ್ಲಿರುವ ದುಷ್ಟ ಶಕ್ತಿಗಳು ನನ್ನ ಮಂತ್ರ ನಿಷ್ಠೆಯನ್ನು ಭಂಗಗೊಳಿಸದಂತೆ ಕಾಪಾಡುವ ಬಾಧ್ಯತೆ ನಿನ್ನದು. ಅಂದರೆ ಒಂದು ರೀತಿ ನೀನು ನನ್ನನ್ನು ರಕ್ಷಿಸಬೇಕು. ಈ ಮೊದಲು ಕೈಗೂಡಿಸಿಕೊಂಡ ನೋಡು ಧೈರ್ಯ, ಅದನ್ನು ನೀನು ಬಿಡಬಾರದು" ಎಂದ ಪದ್ಮಪಾದ.

"ನಾನು ನಿನ್ನನ್ನು ರಕ್ಷಿಸುವುದೇ?"

"ಹೌದು. ನೀನು ನನ್ನನ್ನು ಕಾಪಾಡಬೇಕು. ನಾನು ಮಂತ್ರನಿಷ್ಠೆಯಲ್ಲಿರುವಾಗ ನನ್ನ ಸುತ್ತ ಮುತ್ತಾ ನಡೆಯುವ ವಿದ್ಯಮಾನಗಳು ಯಾವುವೂ ನನಗೆ ತಿಳಿಯುವುದಿಲ್ಲ. ಆಯುಧಪಾಣಿಯಾಗಿ ನೀನು ನನ್ನನ್ನು ಕಾಪಾಡ ಬೇಕಾಗುತ್ತಿದೆ. ಇದೋ ಆಯುಧ" ಎಂದು ಪದ್ಮಪಾದನು ಆಕಾಶದ ಕಡೆ ಕೈ ಚಾಚಲು ಥಳಥಳಿಸುವ ಗದೆಯೊಂದು ಅವನ ಕೈಗೆ ಬಂದಿತು. ಅದನ್ನು ಅವನು ಪಿಂಗಳನಿಗೆ ಕೊಟ್ಟನು. ಪಿಂಗಳನು ಪದ್ಮಪಾದನಿಂದ ಗದೆಯನ್ನು ಪಡೆದುಕೊಂಡು





ವುತ್ಸಾಹದಿಂದ ಅದನ್ನು ಗಿರಗಿರನೆ ತಿರುಗಿಸಿ ಭುಜದಮೇಲಿಟ್ಟುಕೊಂಡನು. ಪದ್ಮಪಾದನು ಅವನಕಡೆ ಬಲುಮೆಯಿಂದ ನೋಡಿ, "ಹಾಗಾದರೆ ಪಿಂಗಳಾ, ಇನ್ನು ನಾನು ಸಮಾಧಿಗಿಳಿಯುವೆನು. ನೀನು ಬಹಳ ಎಚ್ಚರಿಕೆಯಿಂದ ಕಾಯುತ್ತಿರು. ಮಾಯಾರೂಪ ತಾಳಿ ನಮಗೆ ತೊಂದರೆ ಗೊಳಿಸಲು ಬರುವ ಮಹಾಮಾಯನ ಪಿಶಾಚಗಣದಿಂದ ನನ್ನ ಮತ್ತು ನಿನ್ನ ಪ್ರಾಣಗಳನ್ನು ಕಾಪಾಡುವ ಬಾಧ್ಯತೆ ನಿನ್ನದು. ಶೀಘ್ರದಲ್ಲಿ ಈ ನದಿಯ ನೀರು ಬತ್ತಿಹೋಗುವಂತೆ ಮಾಡಲು ಪ್ರಯತ್ನಿಸುವೆನು" ಎಂದನು.

"ಹೂಂ, ಆಗಲಿ. ಈ ಗದೆಯ ಸಹಾಯದಿಂದ ಎಂಥ ರಕ್ಕಸರನ್ನಾದರೂ ಹೊಡೆದಟ್ಟಬಲ್ಲೆ" ಎಂದ ಪಿಂಗಳ ಉತ್ಸಾಹದಿಂದ.

ಪದ್ಮಪಾದನು ನದಿಯ ದಡದಲ್ಲಿ ಪದ್ಮಾಸನ ಹಾಕಿಕೊಂಡು ಕುಳಿತನು. ನದಿಯ ನೀರನ್ನು ಒಂದೆರಡು ಬಾರಿ ಕೈಯಿಂದ ಕದಡಿಸಿ, "ಜಲ, ಸರ್ವಸ್ತಂಭನಂ.... ಕುರುಕರು.... ಶೀಘ್ರಂ ವಶ್ಯಂ.... ಠಃಠಃ..." ಎಂದು ಮಂತ್ರೋಚ್ಚಾರ ಮಾಡಿ ಕಣ್ಣು ಮುಚ್ಚಿದನು.

ಪದ್ಮಪಾದನು ಈ ರೀತಿ ಕಣ್ಣು ಮುಚ್ಚಿದ ಕೂಡಲೇ ಒಂದು ವಿಕೃತವಾದ ಧ್ವನಿ ಕೇಳಿಸಿತು. ಪಿಂಗಳನು ಮೊದಲು ಬೆದರಿದನಾದರೂ ಕೂಡಲೇ ಧೈರ್ಯ ವಹಿಸಿ, ಭುಜದಮೇಲಿದ್ದ ಗದೆಯನ್ನು ಕೆಳಗಿಳಿಸಿ ಆಕಾಶದ ಕಡೆ ಸುತ್ತೂ ನೋಡಿದನು. ಫಕ್ಕನೆ ಕತ್ತಲೆ ಕವಿಯಿತು. ಒಂದು ಕ್ಷಣ ಮಾತ್ರದಲ್ಲಿ ಆಕಾಶವೆಲ್ಲ ಕಾರ್ಮೋಡಗಳಿಂದ ಕವಿದುಕೊಂಡಿತು. ಅದು ನೋಡುತ್ತಿರುವಂತೆಯೇ ಕ್ಷೀಣಿಸಿ ಕ್ಷೀಣಿಸಿ ಕ್ರಮೇಣ ಆನೆಯಷ್ಟಾಯಿತು.

"ಓಹೋ, ಹಿಂದೆ ನನ್ನಮೇಲೆ ನುಗ್ಗಿದ ಮಾಯಾ ಗಜ ಮತ್ತೆ ನನ್ನ ಮೇಲೆ ಬೀಳಬಹುದು" ಎಂದು ಪಿಂಗಳನು ಗದೆಯನ್ನು ಭದ್ರವಾಗಿ ಹಿಡಿದು ಸಿದ್ಧವಾಗಿ ನಿಂತುಕೊಂಡನು. ಆದರೆ ಅವನ ಮೊದಲಿನ ಊಹೆ ತಪ್ಪಾಯಿತು. ಅದು ಆನೆಯಲ್ಲ. ಆ ಮೇಘವು ಆನೆಯಾಕೃತಿಯನ್ನು ಪಡೆಯದೆ ಒಂದು ಭಾರಿ ಪಕ್ಷಿಯ ರೂಪವನ್ನು ತಾಳಿ ಚಲಿಸಲಾರಂಭಿಸಿತು.

"ಇದೊಂದು ಪಿಶಾಚಿಯಿರಬೇಕು. ಗಂಡಭೇರುಂಡ ಪಕ್ಷಿಯ ರೂಪ ತಾಳಿದೆ" ಎಂದುಕೊಂಡ ಪಿಂಗಳ.




ಗಂಡಭೇರುಂಡ ಪಕ್ಷಿ ಕಿವಿಕಿವುಡಾಗುವಂತೆ ಚೀತ್ಕರಿಸಿ, ರೆಕ್ಕೆಗಳನ್ನು ಟಪಟಪನೆ ಬಡಿಯುತ್ತಾ ನೆಟ್ಟಗೆ ಪಿಂಗಳನು ನಿಂತಿದ್ದ ಸ್ಥಳಕ್ಕೆ ಇಳಿಯ ಲಾರಂಭಿಸಿತು.

ಅದು ಕೆಳಗಿಳಿಯುತ್ತಿರುವಂತೆ ಅದರ ರೆಕ್ಕೆಗಳ ಬಡಿತದಿಂದ ಬರುವ ಗಾಳಿ ತುಫಾನಿನಂತೆ ಬೀಸಿತು. ಅದರ ಒತ್ತಡಕ್ಕೆ ಆ ಪ್ರದೇಶದಲ್ಲಿದ್ದ ಗಿಡಮರಗಳು ಭಾರಿ ತುಫಾನಿಗೆ ಸಿಕ್ಕಿ ಅಲ್ಲಾಡು ವಂತೆ ಜೋರಾಗಿ ಅಲುಗಾಡಿದುವು.

ಪಿಂಗಳನು ಚಲಿಸಲಿಲ್ಲ. ಆ ಪಕ್ಷಿ ತನ್ನನ್ನು ಕೋಳಿಮರಿಯಂತೆ ಹಾರಿಸಿಕೊಂಡು ಹೋಗಲು ಬರುತ್ತಿರುವುದೆಂದು ಅವನಿಗೆ ತಿಳಿದಿತ್ತು. ತನ್ನ ಬಳಿ ಮಂತ್ರಶಕ್ತಿಯುಳ್ಳ ಗದೆ ಇದ್ದುದರಿಂದ ಅವನು ಗಾಬರಿಗೊಳ್ಳಲಿಲ್ಲ.



ಪಿಂಗಳನು ಗದೆಯನ್ನು ಎರಡು ಕೈಗಳಲ್ಲಿ ಬಿಗಿಹಿಡಿದು ಮೇಲಕ್ಕೆತ್ತಿದನು. ಪಕ್ಷಿ ಅವನನ್ನು ಸಮೀಪಿಸುತಿತ್ತು. ಮೊನಚಾದ ಕೊಕ್ಕು, ಹರಿತ ವಾದ ಕಾಲುಗುರುಗಳು, ಕಿಡಿಕಾರುವ ಕಣ್ಣು ಗಳು ನೋಡಲು ಭಯಂಕರವಾಗಿದ್ದುವು. ಅದು ಸಮೀಪಿಸುತ್ತಿದ್ದಂತೆ ಅದರ ರೆಕ್ಕೆಗಳ ಬಡಿತ ದಿಂದ ರಿವ್ವನೆ ಶಬ್ದ ಬರುತಿತ್ತು. ಆ ಗಾಳಿಯ ರಭಸಕ್ಕೆ ಪಿಂಗಳನು ಅವನ ಪರವೆಯಿಲ್ಲದೆಯೇ ಒಂದಷ್ಟು ದೂರ ಸರಿದು ಹೋಗಿದ್ದನು. ಅದೇ ಸಮಯದಲ್ಲಿ ಆ ಪಕ್ಷಿ ಅವನ ತಲೆಯನ್ನು ಕುಕ್ಕಲು ಪ್ರಯತ್ನಿಸಿತು. ಪಿಂಗಳನು ಗದೆ ಯನ್ನು ಬಲವಾಗಿ ಬೀಸಿದನು. ಆದರೆ ಪಕ್ಷಿ ಆ ಏಟನ್ನು ತಪ್ಪಿಸಿಕೊಂಡು ವಿಕೃತವಾಗಿ ಅರ ಚುತ್ತಾ ಮೇಲಕ್ಕೆ ಹಾರಿತು.

"ಬದುಕಿದೆ" ಎಂದು ಪಿಂಗಳನು ಸಮಾ ಧಾನ ತಂದುಕೊಂಡು ತಲೆಯೆತ್ತಿ ಮೇಲೆ ನೋಡಿದನು. ಪಕ್ಷಿ ಬಹಳ ಎತ್ತರ ಹಾರಿ, ಈ ಸಾರಿ ಅತಿ ವೇಗದಿಂದ ಕೆಳಗಿಳಿದು ಬರು ತಿತ್ತು. ಪಿಂಗಳನು ಕಾಲೂರಿಸಿ ನಿಂತು ಗದೆ ಯನ್ನು ಅದರಮೇಲೆ ಬೀಸಲು ಸಿದ್ಧನಾದನು. ಪಕ್ಷಿ ರಿವ್ವನೆ ಅವನ ತಲೆಯಮೇಲೆ ಬರಲು, ಗುರಿನೋಡಿ ಗದೆಯನ್ನು ಬೀಸಿದನು. ಮರು ಕ್ಷಣವೇ ಭಯಂಕರ ಶಬ್ದ ಕೇಳಿಸಿತು. ಪಕ್ಷಿಯ ತಲೆಯೊಂದು ಕಡೆ, ರೆಕ್ಕೆ ಕಾಲು ಒಂದು ಕಡೆ ಹಾರಿ ಕೆಳಗೆ ಬಿದ್ದುವು.

ಪಿಂಗಳನು ಆ ದೃಶ್ಯವನ್ನು ಕಂಡು ಅತಿ ಸಂತೋಷದಿಂದ 'ಜೈ ಪದ್ಮಪಾದ' ಎಂದು ಗದೆ

ಯನ್ನು ಗಿರಗಿರನೆ ತಿರುವುತ್ತಾ ಕುಣಿದನು. ತರುವಾಯ ಮಂತ್ರನಿಷ್ಠೆಯಲ್ಲಿ ಕುಳಿತ್ತಿದ್ದ ಪದ್ಮಪಾದನ ಕಡೆ ನೋಡಿದನು.

ಪದ್ಮಪಾದನು ಧ್ಯಾನಾಸಕ್ತನಾಗಿದ್ದನು. ಅವನ ಕಣ್ಣುಗಳು ಮುಚ್ಚಿದ್ದುವು. ತುಟಿಗಳು ಮಾತ್ರ ಅಲುಗಾಡುತಿದ್ದವು. "ಈ ಗಲಭೆಯಿಂದ ಪದ್ಮಪಾದನಿಗೆ ತಪೋಭಂಗವಾಗಲಿಲ್ಲವಲ್ಲಾ" ಎಂದು ತೃಪ್ತಿಪಡುತ್ತಿರಲು ಅವನಿಗೆ ಕಾಲು ಗೆಜ್ಜೆಯ ಧ್ವನಿ ಕೇಳಿಸಿತು.

ಪಿಂಗಳನು ದಿಗ್ಭ್ರಮೆಗೊಂಡನು. ಅವನ ಎದುರು ಸರ್ವಾಲಂಕಾರ ಪೂರಿತಳಾದ ಅಪ್ಸರೆಯಂತಹ ಒಬ್ಬ ಯುವತಿ ನರ್ತಿಸುತ್ತಿದ್ದಳು. ಅವಳ ಸೌಂದರ್ಯವನ್ನು ಕಂಡು, ಗಂಧರ್ವಗಾನವನ್ನು ಕೇಳಿ ಪಿಂಗಳನು ಒಂದು ಕ್ಷಣ ಕಾಲ ಮಂತ್ರಮುಗ್ಧನಾದನು; ಮೈಮರೆದನು.

"ಪಿಂಗಳಾ, ನಿನ್ನ ಅಂದಕ್ಕೆ ಮರುಳಾಗಿ ನಾನು ಇಲ್ಲಿಗೆ ಬಂದಿರುವೆನು. ನನ್ನನ್ನು ವಿವಾಹಮಾಡಿಕೊ. ನಿನಗೆ ಸರ್ವಸಂಪದಗಳನ್ನು ಕೊಡಿಸುವೆನು" ಎಂದಳು ಆ ಯುವತಿ.

ಆ ವೇಳೆಗೆ ಪಿಂಗಳನು ತನ್ನ ಮನೋವೇಗವನ್ನು ತಡೆದು ನಸುನಗುತ್ತಾ, "ಓ, ನನ್ನ ಅಂದಕ್ಕೆ ಮರುಳಾಗಿ ಬಂದಿರುವೆಯಾ? ನಾನೊಬ್ಬ ರಾಜಕುಮಾರನೆಂದು ಭಾವಿಸಿರಬೇಕು. ಅದು ನಿನ್ನ ಭ್ರಮೆಮಾತ್ರ. ನಾನು ಜಾಲರಿ ಪಿಂಗಳ" ಎಂದ.

"ಜಾಲರಿಯಾದರೇನು? ನಿನ್ನಂತಹ ಚೆಲುವರು ಹದಿನಾಲ್ಕು ಲೋಕಗಳಲ್ಲೂ ಇರಲಾರನೆಂದು ಹೇಳಬಲ್ಲೆ" ಎಂದು ಹೇಳಿ ಮತ್ತೆ ನರ್ತಿಸಲು ಪ್ರಾರಂಭಿಸಿದಳು.




ಪಿಂಗಳನು ಅವಳಕಡೆ ಸಂಶಯ ದಿಂದ ನೋಡಿ "ಎಲೇ ನಾರೀಮಣಿ, ನಿನ್ನ ಕಂಠಧ್ವನಿಯೊಂದಿಗೆ ಪಕ್ಕವಾದ್ಯಗಳ ಸಂಗೀತವು ಕೇಳಿಸುತ್ತಿದೆ. ಆದರೆ ಆ ವಾದ್ಯಗಾರರುಮಾತ್ರ ಏಕೆ ನನ್ನ ಕಣ್ಣಿಗೆ ಬೀಳುತ್ತಿಲ್ಲ" ಎಂದ.

ನನ್ನನ್ನು ವಿವಾಹವಾದ ಹೊರತು ಅವರು ನಿನ್ನ ಕಣ್ಣಿಗೆ ಬೀಳಲಾರರು. ನಾನು ಖೇಚರಿ" ಎಂದಳು ಆ ಯುವತಿ.

"ಖೇಚರಿಯೋ ನೀನು? ಅಂದರೆ ಆಕಾಶದಲ್ಲಿ ಸಂಚರಿಸುವ ಗಂಧರ್ವ ಕನ್ಯೆ ಅಲ್ಲವೆ?" ಎಂದು ಪಿಂಗಳನು ಗದೆಯನ್ನು ಮೇಲೆತ್ತಿ ಅವಳನ್ನು ಸಮೀಪಿಸಿದನು.





"ಪಿಂಗಳಾ, ಆ ಗದೆಯನ್ನು ದೂರ ಎಸೆದು ಬಿಡು. ನನಗೆ ಆಯುಧಗಳೆಂದರೆ ಹೆದರಿಕೆ" ಎಂದು ಹೇಳುತ್ತಾ ಖೇಚರಿ ಹಿಂದಕ್ಕೆ ಎರಡು ಹೆಜ್ಜೆ ಹಾಕಿದಳು.

ಪಿಂಗಳನಿಗೆ ಆ ಯುವತಿ ಯಾರೋ ತಿಳಿಯಿತು. ಪದ್ಮಪಾದನ ತಪೋನಿಷ್ಠೆಗೆ ಭಂಗಬರದಂತೆ ಕಾಪಾಡುತ್ತಿರುವ ತನ್ನನ್ನು ಮೊದಲು ಯುಕ್ತಿಯಿಂದ ಸಂಹರಿಸಲು ಬಂದ ಪಿಶಾಚಿನಿಯೆಂದು ಗ್ರಹಿಸಿದನು. ಅವನು ಉಕ್ಕಿ ಬರುತ್ತಿದ್ದ ಕೋಪವನ್ನು ತಡೆದು, ಮುಗುಳುನಗೆ ಬೀರುತ್ತಾ " ಎಲೈ ಖೇಚರ ಕಾಂತಾಮಣಿ, ನಿನ್ನನ್ನು ವಿವಾಹವಾಗಲು ನನ್ನ ಅಭ್ಯಂತರವೇನಿಲ್ಲ. ಆದರೆ ನನ್ನ ಮುತ್ತಜ್ಜನ ಮೂರನೇ ಹೆಂಡತಿ ಇಲ್ಲವಲ್ಲಾ ಎಂದು ವಿಚಾರಿಸುತಿದ್ದೇನೆ. ನನ್ನನ್ನು ಆಕೆಯೇ ಸಾಕಿ ಸಲುಹಿದಳು. ಆದರೂ ಚಿಂತೆಯಿಲ್ಲಬಿಡು. ನಮ್ಮ ಕುಲಾಚಾರದಂತೆ ಮದುವೆಗೆ ಮೊದಲು ಈ ಗದೆಯನ್ನು ನಿನ್ನ ತಲೆಗೆ ಸೋಕಿಸುವೆನು. ಮುಂದೆ ಬಾ" ಎಂದು ಮುಂದೆ ನುಗ್ಗಿದನು.

ಖೇಚರಿ ಕಿಟಾರನೆ ಕಿರಿಚಿ ಓಡಿಹೋಗಲು ಯತ್ನಿಸಿದಳು. ಆದರೆ ಪಿಂಗಳನು ತನ್ನ ಗದೆಯಿಂದ ಅವಳ ತಲೆಯ ಮೇಲೆ ಬಲವಾಗಿ ಹೊಡೆದನು. ಮರುಕ್ಷಣವೇ ಮಾಯಾರೂಪದಲ್ಲಿ ಬಂದ್ದಿದ ಆ ಪಿಶಾಚಿನಿ ತುಂಡು ತುಂಡಾಗಿ ಗಾಳಿಯಲ್ಲಿ ಲೀನವಾಗಿಹೋದಳು.

ಪಿಂಗಳನು ಗಹಗಹಿಸಿ ನಕ್ಕು ಪದ್ಮಪಾದನ ಬಳಿಗೆ ಹೋದನು. ಆಗಲೂ ಪದ್ಮಪಾದನು ಕಣ್ಣು ಮುಚ್ಚಿ ಸಮಾಧಿಗ್ರಸ್ತನಾಗಿದ್ದನು. ಪಿಂಗಳನ ದೃಷ್ಟಿ ನದಿಯಕಡೆ ಹೋಯಿತು. ಅವನು ಆಶ್ಚರ್ಯ ಚಕಿತನಾದನು. ನದಿ ಕ್ರಮಕ್ರಮೇಣ ಬತ್ತಿ ಹೋಗುತ್ತಿತ್ತು. ಅಂದಿನ ವರೆಗು ಆ ನದಿಯಲ್ಲಿ ಆವಾಸವೇರ್ಪಡಿಸಿಕೊಂಡಿದ್ದ ಜಲಚರಗಳು, ಕುಪ್ಪೆಕುಪ್ಪೆಯಾಗಿ ಹೊರಬಿದ್ದು, ಅತ್ತಿತ್ತ ಸುಳಿದಾಡುತ್ತಿದ್ದುವು.

"ಪಿಂಗಳಾ" ಎಂದು ಕೂಗುತ್ತಾ ಪದ್ಮಪಾದನು ಕಣ್ಣು ತೆರೆದನು. ಪಿಂಗಳನು ಪಕ್ಕನೆ ಪದ್ಮಪಾದನನ್ನು ಸಮೀಪಿಸಿ, "ಪದ್ಮಪಾದ, ನದಿಯ ಕಡೆ ನೋಡಿ" ಎಂದನು.

ಪದ್ಮಪಾದನು ನದಿಯ ಕಡೆನೋಡಿ " ಭೇಷ್ ಮಹಾಮಾಯನ ಶಿಷ್ಯರು ತಮ್ಮ ಮಾತನ್ನುಳಿಸಿಕೊಂಡರು. ನಮಗೆ ಬೇಕಾದ ದೇವಾಲಯವೆಲ್ಲಿ?"





ಎಂದು ಕೇಳಿದನು. ಪಿಂಗಳನು ನದಿಯನಡುವೆಗೆ ಬೆರಳುಮಾಡಿ ತೋರಿಸುತ್ತಾ "ಅದೋ, ಈಗ ತಾನೇ ಗುಡಿಯ ಗೋಪುರ ನೀರಿನಿಂದ ಹೊರಗೆ ಕಾಣಬರುತ್ತಿದೆ. ಮಹಾಮಾಯನ ಆ ಸಮಾಧಿ ಈ ದೇವಾಲಯದಲ್ಲಿರುವುದೇ?" ಎಂದು ಪ್ರಶ್ನೆ ಮಾಡಿದನು.

ಪದ್ಮಪಾದನು ಪಿಂಗಳನು ತೋರಿಸಿದ ಕಡೆ ನೋಡಿ, ತೃಪ್ತಿಯನಗೆ ಬೀರುತ್ತಾ "ಅದೇ ಪಾಳು ಬಿದ್ದ ದೇಗುಲ. ನದಿಯಲ್ಲಿ ಒಂದು ತೊಟ್ಟು ನೀರಿಲ್ಲದೆ ಬತ್ತಿ ಹೋದನಂತರ, ಮಹಾಮಾಯನ ಶಿಷ್ಯರಿಬ್ಬರೂ ನಮ್ಮ ಬಳಿಗೆ ಬರುವರು. ಸರಿ, ನಾನು ನಿಷ್ಠೆಯಲ್ಲಿದ್ದಾಗ ಅದನ್ನು ಭಂಗಗೊಳಿಸಲು ಪಿಶಾಚಿಗಣವೇನೂ ಬರಲಿಲ್ಲವಷ್ಟೆ?" ಎಂದು ಕೇಳಿದನು.

ಪಿಂಗಳನು ತಾನು ಸಂಹರಿಸಿದ ಗಂಡಭೇರುಂಡಪಕ್ಷಿ ಮತ್ತು ಖೇಚರಗಳ ವೃತ್ತಾಂತವನ್ನು ವಿವರಿಸಿ ಹೇಳಿದನು. ಅವನ ಕಣ್ಣುಗಳು ಸಂತೋಷ ಸೂಸುತಿದ್ದುವು.

ಎಲ್ಲವನ್ನು ಕೇಳಿದನಂತರ ಪದ್ಮಪಾದನು ಪಿಂಗಳನ ಭುಜವನ್ನು ಮೆಚ್ಚಿ ಕೈಯಿಂದ ತಟ್ಟುತ್ತಾ "ಪಿಂಗಳಾ, ನೀನು ಗಂಧರ್ವ ರೂಪದಲ್ಲಿ ಬಂದ ಪಿಶಾಚಿನಿಯ ಸೌಂದರ್ಯಕ್ಕೆ ಮರುಳಾಗದೆ ನಿನ್ನ ಕರ್ತವ್ಯವನ್ನು ಪಾಲಿಸಿದೆ. ಇವನ್ನು ಕಂಡು ನನಗೆ ತುಂಬಾ ಆನಂದವಾಗಿದೆ. ನೀನು ಪಾಳು ದೇಗುಲವನ್ನು ಪ್ರವೇಶಿಸುವಾಗ ಇಂತಹ ಅನೇಕ ವಿಚಿತ್ರಗಳನ್ನು ಎದುರಿಸ ಬೇಕಾಗುತ್ತಿದೆ. ಹುಷಾರ್" ಎಂದ.

ಅಷ್ಟರಲ್ಲಿ ನದಿ ಮಧ್ಯದಿಂದ "ಮಹಾಮಾಂತ್ರಿಕನೇ" ಎಂಬ ಚಂಡ ಗಂಭೀರವಾದ ಕೂಗು ಕೇಳಿಸಿತು.

ಪದ್ಮಪಾದ ಪಿಂಗಳರು ಆ ಶಬ್ದ ಬಂದತ್ತ ಕಡೆ ಕಣ್ಣರಳಿಸಿ ನೋಡಿದರು. ನದಿಯಲ್ಲಿ ಒಂದು ತೊಟ್ಟು ನೀರಾದರೂ ಇರಲಿಲ್ಲ. ತಾಳೆ ಮರದಷ್ಟೆತ್ತರದ ಒಂದು ಕಲ್ಲುಗೋಡೆ, ಅದರಲ್ಲಿ ಮುಚ್ಚಿದ್ದ ಬಂದು ಬಾಗಿಲು, ಗೋಡೆಯ ಹಿಂಭಾಗದಲ್ಲ ಕಂಡೂ ಕಾಣಿಸದಂತಹ ಒಂದು ದೇವಾಲಯದ ಶಿಖರ, ಅವರ ದೃಷ್ಟಿಗೆಬಿತ್ತು. ಮಹಾಮಾಯನ ಶಿಷ್ಯರಿಬ್ಬರೂ ಅವರಿಗೆ ಕಾಣಿಸಿದರು. ಅವರು ಪದ್ಮಪಾದನ ಕಡೆಯೇ ನೋಡುತ್ತಿದ್ದರು.

(ಇನ್ನೂ ಇದೆ)





# ಪಿಶಾಚಿಗಳ ದಿಬ್ಬ

ದೃಢಕಾಯನಾದ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ, ಮರದಿಂದ ಶವವನ್ನು ಕೆಳಗಿಳಿಸಿ, ತನ್ನ ಭುಜದಮೇಲೆ ಹಾಕಿಕೊಂಡು ಮೌನವಾಗಿ ಮತ್ತೊಮ್ಮೆ ಮಸಣದ ಮಾರ್ಗವಾಗಿ ನಡೆದನು.

ಆಗ ಶವದಲ್ಲಿದ್ದ ಬೇತಾಳ, "ರಾಜನೇ, ನಿನ್ನನ್ನು ನೋಡಿದರೆ ನನಗೆ ವೀರಭಾನು ಎಂಬ ಸಾಹಸಿಯು ಜ್ಞಾಪಕಕ್ಕೆ ಬರುತ್ತಾನೆ. ಆತನೂ ನಿನ್ನಂತಯೇ ಒಬ್ಬೊಂಟಿಗನಾಗಿ ಪಿಶಾಚಿಗಳೊಂದಿಗೆ ಸಂಪರ್ಕ ಬೆಳೆಸಬೇಕಾಯಿತು. ನಿನಗೆ ಆತನ ಕಥೆ ಹೇಳುತ್ತೇನೆ" ಎಂದು ಈರೀತಿ ಹೇಳತೊಡಗಿತು ;

ಒಂದು ಗ್ರಾಮದಲ್ಲಿ ರಾಮಯ್ಯನೆಂಬಾತನಿದ್ದ. ಅವನಿಗೆ ಆ ಗ್ರಾಮದ ಸುತ್ತಮುತ್ತ ಅನೇಕ ಹೊಲಗದ್ದೆಗಳಿದ್ದುವು. ಮಕ್ಕಳು ಮರಿಯಿಲ್ಲದೆ ಆತನು ಸತ್ತುಹೋಗಲು, ಬಂಧುಬಳಗ ಆ ಭೂಮಿಯನ್ನೆಲ್ಲಾ ಹಂಚಿಕೊಂಡರು. ರಾಮಯ್ಯನ ಜಮೀನಿನಲ್ಲಿ ಬೀಳುಬಿದ್ದಿದ್ದ

ಬೇತಾಳ ಕಥೆಗಳು



ಒಂದು ಹೊಲವಿತ್ತು. ಅದನ್ನು ಪಿಶಾಚಿದಿಬ್ಬ ವೆಂದು ಕರೆಯುತ್ತಿದ್ದರು. ರಾಮಯ್ಯ ಜೀವಿಸಿರುವಾಗ ಅದನ್ನು ಸಾಗುವಳಿ ಮಾಡಲು ಅನೇಕರಿಗೆ ಗೇಣಿಗೆ ಕೊಟ್ಟಿದ್ದನು. ಆದರೆ ಒಬ್ಬರೂ ಆ ಹೊಲವನ್ನು ಉಳುಮೆಮಾಡುವ ಗೋಜಿಗೆ ಹೋಗಲಿಲ್ಲ. ಯಾರಾದರೂ ಉಳಲು ಪ್ರಯತ್ನಿಸಿದರೆ ನೊಗಕ್ಕೆ ಕಟ್ಟಿದ್ದ ಎತ್ತುಗಳು ಬೆದರಿ ಹಗ್ಗ ಕಿತ್ತುಕೊಂಡು ಎತ್ತಲೋ ಓಡಿಬಿಡುತ್ತಿದ್ದುವು. ಅಲ್ಲಿ ಪಿಶಾಚಿಗಳು ವಾಸಿಸುತ್ತಿರುವುವೆಂದೂ, ಅಂತಲೇ ಅವು ಉಳಲು ಆಸ್ಪದ ಕೊಡುತ್ತಿಲ್ಲವೆಂದೂ ಜನರಾಡಿಕೊಳ್ಳುತ್ತಿದ್ದರು. ಬಹಳ ದಿನಗಳಿಂದ ಸಾಗುವಳಿ ಇಲ್ಲದ ಕಾರಣ ಅಲ್ಲಿ ದಟ್ಟವಾಗಿ ಗಿಡಗಂಟೆಗಳು ಬೆಳೆದಿದ್ದುವು. ಆ ದೆವ್ವಗಳದಿಬ್ಬ ಯಾರಿಗೆ ಸೇರಬೇಕೆಂಬ ಸಮಸ್ಯೆ ಬಂತು. ಎಲ್ಲರೂ ತಮಗೆ ಬೇಡವೆಂದು ಮುಖ ತಿರುವಿದರು. ರಾಮಯ್ಯನ ದೂರದ ನೆಂಟರಲ್ಲಿ ಗೌರಿ ಎಂಬೊಬ್ಬ ಹುಡುಗಿಯಿದ್ದಳು. ಆ ಹುಡುಗಿ ಅವಿವಾಹಿತೆ. ಅವಳಿಗೆ ತಂದೆ ತಾಯಿಗಳಿರಲಿಲ್ಲ. ಸಣ್ಣ ಗುಡಿಸಲೊಂದರಲ್ಲಿ ವಾಸಮಾಡಿಕೊಂಡಿದ್ದಳು. ಹಿತ್ತಲಲ್ಲಿ ಸೊಪ್ಪು ಸದೆ ಬೆಳೆಯಿಸಿ, ಮುಂಜಾನೆಯಿಂದ ಸಂಜೆಯ ವರೆವಿಗೂ ನೂಲುತೆಗೆಯುತ್ತಾ ತನ್ನ ಜೀವನ ಸಾಗಿಸುತ್ತಿದ್ದಳು.

"ಪಾಪ, ಗೌರಿಗೆ ಈ ಹೊಲ ಕೊಟ್ಟರೆ ಅದರ ಆಶೆಗಾಗಿಯಾದರೂ ಯಾರಾದರೂ ಅವಳನ್ನು ಮದುವೆಯಾದಾರು. ದಿಕ್ಕಿಲ್ಲದ ಹುಡುಗಿಯ ಬಾಳು ಒಂದು ಹಾದಿಗೆ ಬರುತ್ತದೆ. ರಾಮಯ್ಯನ ಆಸ್ತಿಯಲ್ಲಿ ಗೌರಿಗೂ ಒಂದು ಪಾಲು ಸೇರಬೇಕಾದುದು ನ್ಯಾಯ" ಎಂದನೊಬ್ಬ. ಈ ಸಲಹೆಗೆ ಎಲ್ಲರ ಸಮ್ಮತಿ ಸಿಕ್ಕಿತು.

ಗೌರಿ ತೀರಾ ದಿಕ್ಕಿಲ್ಲದವಳಲ್ಲ. ಚಿಕ್ಕಂದಿನಲ್ಲೇ ಅವಳಿಗೆ ಗಂಡನನ್ನು ಗೊತ್ತುಮಾಡಿದ್ದರು. ಅವನ ಹೆಸರು ವೀರಭಾನು. ಅವನು ಗೌರಿಯಂತೆಯೇ ಬಡವ. ಹಣ ಸಂಪಾದಿಸಿಕೊಂಡು ಬಂದು ಗೌರಿಯನ್ನು ವಿವಾಹವಾಗುವ ಉದ್ದೇಶದಿಂದ ನೆರೆಯೂರಿಗೆ ಹೋಗಿ ಅಂದೇ ಬಂದಿದ್ದ.

ಅವನು ಗೌರಿಯ ಗುಡಿಸಲಿನಲ್ಲಿ ಅಡಿಯಿಡುವಾಗ ಅವಳು ರಾಟೆ ತಿರುಗಿಸುತ್ತಿದ್ದಳು. ಅವನನ್ನು ಕಂಡು ಅವಳು ಆನಂದಪರವಶಳಾದಳು. ವೀರಭಾನು ತನ್ನ ಭುಜದಮೇಲಿದ್ದ ಮೂಟೆಯನ್ನು ಕೆಳಗಿಳಿಸಿ, ತಾನು ಸಂಪಾದಿಸಿ ತಂದ

ನಗ ನಾಣ್ಯಗಳನ್ನು ಗೌರಿಗೆ ತೋರಿಸಿ, "ಗೌರಿ, ಇದೊ ನಿನಗೆ ಒಡವೆ. ನಾವಿನ್ನು ಯಾರ ಮತ್ತು ಯಾವ ಅಭ್ಯಂತರವಿಲ್ಲದೆ ವಿವಾಹವಾಗಬಹುದು. ನಾನು ದುಡಿದು ನಿನ್ನನ್ನೂ, ನಮ್ಮ ಮಕ್ಕಳನ್ನೂ ಕಾಪಾಡುವೆನು" ಎಂದ ಹೆಮ್ಮೆಯಿಂದ.

ಗೌರಿ ಸಂತೋಷದಿಂದ ಮದುವೆಗೆ ಸಮ್ಮತಿಸಿದಳು. ಆ ವೇಳೆಗೆ ರಾಮಯ್ಯನ ಬಂಧುಗಳಲ್ಲೊಬ್ಬನು ಬಂದು, "ಗೌರಿ, ನಿನ್ನ ಅದೃಷ್ಟ ಕುಲಾಯಿಸಿತು. ದೊಡ್ಡಪ್ಪನ ಆಸ್ತಿಯಲ್ಲಿ ನಿನಗೂ ಒಂದು ಭಾಗ ಬರುವಂತೆ ವ್ಯವಸ್ಥೆ ಮಾಡಿದ್ದೇವೆ. ಬೆಟ್ಟದ ತಪ್ಪಲಲ್ಲಿರುವ ಪ್ರದೇಶವನ್ನೆಲ್ಲಾ ನಿನ್ನ ಹೆಸರಿಗೆ ಬರೆಯಬೇಕೆಂದು ಹಿರಿಯರು ತೀರ್ಮಾನಿಸಿದ್ದಾರೆ" ಎಂದು ಹೇಳಿ ಹೊರಟು ಹೋದ.

ಗೌರಿಗೆ ದುಃಖ ಬಂತು. ಕಂಗಳಲ್ಲಿ ನೀರು ತುಂಬಿತು. ಎಲ್ಲರೂ ಫಲವತ್ತಾದ ನೆಲವನ್ನು ತೆಗೆದುಕೊಂಡು ತನ್ನನ್ನು ದಿಕ್ಕಿಲ್ಲದವಳನ್ನಾಗಿ ಮಾಡಿ, ಮೇಲೆ ಪಿಶಾಚಿದಿಬ್ಬವನ್ನು ತಲೆಗೆ ಕಟ್ಟಿದ್ದಾರೆ.' ಎಂದು ಅವಳು ಪರಿತಪಿಸಿದಳು.

ಗೌರಿ ಈ ರೀತಿ ಅಳಲು ಕಾರಣವೇನೋ ವೀರಭಾನುವಿಗೆ ತಿಳಿಯಲಿಲ್ಲ. ಅವಳು ಅವನೊಂದಿಗೆ ಪಿಶಾಚಿದಿಬ್ಬದ ವಿಷಯ ಹೇಳಿದಳು. ಅದಕ್ಕೆ ಅವನು, "ಎಲಾ ಹುಚ್ಚಿ, ಇಷ್ಟಕ್ಕೆ ಅಳಬೇಕೆ? ಪಿಶಾಚಿಗಳು ನಮ್ಮನ್ನೇನು ಮಾಡುತ್ತಿವೆ. ಆ ದಿಬ್ಬವನ್ನು ಸಾಗುವಳಿ ಮಾಡದಿದ್ದರೆ ನನ್ನ ಹೆಸರು ವೀರಭಾನು ಅಲ್ಲ" ಎಂದು ಹೇಳಿ, ಗೌರಿಯನ್ನು ಸಮಾಧಾನ ಪಡಿಸಿದನು.



ವೀರಭಾನು ತನ್ನ ಹತ್ತಿರವಿದ್ದ ಹಣವನ್ನು ಖರ್ಚುಮಾಡಿ, ಒಂದು ಜೊತೆ ಎತ್ತು, ನೇಗಿಲು, ಹಾರೆ, ಪಿಕಾಶಿ ಇತ್ಯಾದಿ ವ್ಯವಸಾಯಕ್ಕೆ ಸಂಬಂಧಿಸಿದ ಸಲಕರಣೆಗಳನ್ನು ಕೊಂಡು ಕೊಂಡ.

ಎಲ್ಲರೂ ಹೊಲ ಉಳುವ ಸಮಯದಲ್ಲಿ ಅವನೂ ಸಹ ಎತ್ತು ಮತ್ತು ನೇಗಿಲು ಹಿಡಿದುಕೊಂಡು ಪಿಶಾಚಿದಿಬ್ಬವನ್ನು ಬೇಸಾಯ ಮಾಡಲು ಹೋದನು. ಆದರೆ ಅವನು ಕೆಲಸವನ್ನು ಆರಂಭಿಸಿದ ಕೂಡಲೇ ಒಂದು ಕರ್ಕಶ ಧ್ವನಿ ಕೇಳಿತು. ಎತ್ತುಗಳೆರಡೂ ಬೆದರಿ ಓಡಿ ಹೋದವು. ವೀರಭಾನು ಒಂದು ಎತ್ತನ್ನಾದರೂ ಹಿಡಿದುಕೊಂಡು ಬರಲು ಯತ್ನಿಸಿದನು. ಆದರೆ ಅದು ಅವನನ್ನು ಕೆಳಗೆಕೆಡವಿ ಓಡಿಹೋಯಿತು. ಅವನ ತಲೆ ಬಂಡೆಗೆ ಬಡೆದು ರಕ್ತ ಸುರಿಯಿತು.

ತನ್ನ ಗಂಡನು ಎತ್ತು ನೇಗಿಲುಗಳಿಲ್ಲದೆ ಗಾಯಗೊಂಡು ಬಂದಿರುವುದನ್ನು ನೋಡಿ ಗೌರಿಯ ಹೃದಯ ಒಡೆಯಿತು. ಅವಳು "ನಾನು ಹೇಳಲಿಲ್ಲವೇ? ಆ ಹಾಳು ದಿಬ್ಬಕ್ಕೆ ಏಕೆ ಹೋದಿರಿ. ಇಷ್ಟು ವರ್ಷ ದುಡಿದು ತಂದ ಹಣ ನೀರಿಗೆಸೆದಂತಾಯಿತು" ಎಂದಳು.

"ನನ್ನನ್ನು ಪಿಶಾಚಿಗಳೇನೂ ಮಾಡಲಿಲ್ಲ. ಬುದ್ಧಿಯಿಲ್ಲದ ಪ್ರಾಣಿಗಳಾದುದರಿಂದ ಎತ್ತುಗಳು ಬೆದರಿ ಓಡಿಹೋದವು. ಅವುಗಳನ್ನು ಹಿಡಿಯಲು ಹೋಗಿ ನನಗೆ ಗಾಯವಾಯಿತು. ಆ ದಿಬ್ಬದ ರಹಸ್ಯ ತಿಳಿದುಕೊಳ್ಳುವ ವರೆವಿಗೆ ನಾನು ಸುಮ್ಮನಿರುವುದಿಲ್ಲ" ಎಂದ ವೀರಭಾನು.

ಅವನು ಅದೇ ರೀತಿ ಮಾಡಿಯೂ ಮಾಡಿದ. ಬೆಳಗಿನ ಜಾವ ಹೊರಟು, ಸಂಜೆತನಕ ನೆಲವನ್ನು ಹಾರೆ ಗುದ್ದಲಿಗಳಿಂದ ಅಗೆಯುವನು. ಒಬ್ಬೊಂಟಿಗ ಎಷ್ಟು ಭೂಮಿ ತಾನೆ ಸಾಗುವಳಿ ಮಾಡಬಲ್ಲ. ಒಂದಿಷ್ಟು ಜಾಗದಲ್ಲಿ ಬೆಳೆಬೆಳೆಸಿ, ಧಾನ್ಯ ಮನೆ ಸೇರಿಸಿದ. ಪಿಶಾಚಿಗಳು ಅವನನ್ನು ಹೆದರಿಸಲು ಯತ್ನಿಸಿದುವು. ಆದರೆ ಅವನು ಅವುಗಳನ್ನು ನಿರ್ಲಕ್ಷಿಸಿದ. ಗೌರಿ ತಾನೂಸಹ ಹೊಲದಲ್ಲಿ ಕೆಲಸಮಾಡಲು ಬರುವೆನೆಂದಳು. ಅವಳು ಆಗ ತುಂಬು ಗರ್ಭಿಣಿ. ಆದುದರಿಂದ ಅವನು ಅದಕ್ಕೆ ಒಪ್ಪಲಿಲ್ಲ. ಅವನು ಮನೆಗೆ ಹಿಂತಿರುಗುವ ವರೆವಿಗೂ ಗೌರಿಯ ಎದೆ ಡವಡವ ಬಡಿದು ಕೊಳ್ಳುತಿತ್ತು.

ಒಂದು ಸಾರಿ. "ಈ ಕಾಳು ನಮಗೆ ಸಾಕು. ಮುಂದಿನ ವರ್ಷ ಇನ್ನೂ ಹೆಚ್ಚು ಬೆಳೆಬೆಳೆಯಿಸುತ್ತೇನೆ. ನೋಡುತ್ತಿರು" ಎಂದ ವೀರಭಾನು



ಗೌರಿಯೊಂದಿಗೆ. ಆ ಪ್ರಕಾರವೇ ಮೂರು ವರ್ಷಗಳು ಕಳೆದುವು. ಪ್ರತಿ ವರ್ಷಬೆಳೆ ಹೆಚ್ಚು ಬೆಳೆಯುತ್ತಿದ್ದರೂ, ಎತ್ತುಗಳಿಲ್ಲದೆ ಒಬ್ಬೊಂಟಿಗನ ಕೃಷಿಯಾದುದರಿಂದ ಪಿಶಾಚಿ ದಿಬ್ಬದ ಒಂದಿಷ್ಟು ಚೂರುನೆಲ ಸಾಗುವಳಿಯಾಯಿತು. ಇಷ್ಟರಲ್ಲಿ ಗೌರಿ ಇಬ್ಬರು ಮಕ್ಕಳ ತಾಯಿಯಾದಳು. ಆ ತಾಯಿ ಮತ್ತು ಮಕ್ಕಳಿಗಾಗಿ ವೀರಭಾನು ಛಲದಿಂದ ಹತ್ತು ಜನರ ಕೆಲಸವನ್ನು ತಾನೊಬ್ಬನೇ ಮಾಡುತ್ತಿದ್ದನು.

ಒಂದು ದಿನ ಅವನು ಹೊಲದಲ್ಲಿ ಕೆಲಸ ಮಾಡುತ್ತಿರಲು ಪಕ್ಕದಲ್ಲಿ ಯಾರೋ ನಿಂತು "ಏನು ಸ್ವಾಮಿ, ಒಂದು ಜೊತೆ ಎತ್ತು ಕೊಂಡುಕೊಂಡು ಬೇಸಾಯ ಮಾಡಬಾರದೇ? ಜಾನುವಾರುಗಳಿಗೆ ಕಡಿಮೆಯೇ. ಏಕೆ ವೃಥಾ ಈ ದೇಹದಂಡನೆ" ಎಂದಂತೆ ಕೇಳಿಸಿತು. ವೀರಭಾನು ತಲೆ ಎತ್ತಿ ನೋಡಿದನು. ದಷ್ಟಪುಷ್ಟನಾದ ಕಪ್ಪನೆಯ ವ್ಯಕ್ತಿ ಪಕ್ಕದಲ್ಲಿ ನಿಂತಿದ್ದ. ಇದೊಂದು ಪಿಶಾಚಿಯೆಂದು ಗ್ರಹಿಸಿ, ವೀರಭಾನು ಬಾಯಿ ತೆಗೆಯದೆ ತನ್ನಪಾಡಿಗೆ ತನ್ನ ಕೆಲಸದಕಡೆ ಗಮನಕೊಡುತ್ತಿದ್ದ. ಆಗ ಕಪ್ಪನೆಯ ವ್ಯಕ್ತಿ, "ಏಕಯ್ಯಾ ಬಾಯಿ ಬಿಚ್ಚುವುದಿಲ್ಲ? ನಿನಗೇನು ಕಷ್ಟವೋ ಹೇಳಬಾರದೇ? ನನ್ನ ಕೈಲಾದ ಸಹಾಯ ಮಾಡುತ್ತೇನೆ" ಎಂದ.

ವೀರಭಾನು ಆ ಕಪ್ಪನೆಯ ವ್ಯಕ್ತಿಯನ್ನು ಸಮೀಪಿಸಿ ತನ್ನ ವೃತ್ತಾಂತವನ್ನೆಲ್ಲಾ ತಿಳಿಸಿದನು. "ನೀನು ಯಾರೋ ನನಗೆ ತಿಳಿದಿದೆ. ನಿನ್ನ ಸಹಾಯ ನನಗೆ ಅಗತ್ಯವಿಲ್ಲ. ನಡಿ ಇಲ್ಲಿಂದ" ಎಂದು ಗದರಿಸಿಕೊಂಡ.





ಕಪ್ಪನೆಯವ್ಯಕ್ತಿ ನಗುತ್ತಾ, "ನನ್ನ ಗುರುತು ಚೆನ್ನಾಗಿ ಹಿಡಿದೆಬಿಡು. ನಾನು ನಿನ್ನ ಹೊಲ ದಲ್ಲಿರುವ ಪಿಶಾಚಿಯಲ್ಲ. ಅದೋ ಅಲ್ಲಿ ಕಾಣುವ ಬೆಟ್ಟದಮೇಲೆ ನಾನು ವಾಸಿಸುತ್ತಿದ್ದೇನೆ. ನನ್ನನ್ನು ಕೊಂಡದೇವರನೆಂದು ಕರೆಯುವರು. ನಿನ್ನನ್ನು ಕಂಡು ನನಗೂ ಸಾಮಾನ್ಯ ಮಾನವನಂತೆ ಕೆಲ ಕಾಲ ಬಾಳುವ ಆಶೆ ಯುಂಟಾಗಿದೆ. ನಿನ್ನ ಬಳಿ ಕೂಲಿಮಾಡಿಕೊಂಡಿರುತ್ತೇನೆ. ಈ ನೆಲ ವನ್ನೆಲ್ಲಾ ಉಳುಮೆ ಮಾಡಿ ಚಿನ್ನ ಬೆಳೆಯಿ ಸೋಣ" ಎಂದ.

"ಕಂಡು ಕಂಡು ನಿನ್ನನ್ನು ಹೇಗೆ ತೆಗೆದು ಕೊಳ್ಳಲಿ?" ಎಂದ ವೀರಭಾನು. "ಏಕೆ? ಭಯವೇ?" ಎಂದು ಮೂದಲಿಸಿದ ಕೊಂಡ ದೇವರ. ವೀರಭಾನುವಿಗೆ ಪೌರುಷ ಬಂತು. "ಸರಿ ಕೂಲಿಗೆ ನೇಮಿಸಿಕೊಳ್ಳುತ್ತೇನೆ. ಕೊಂಡ ಅಂತ ನಿನ್ನನ್ನು ಕರೆಯುವೆನು. ಅದರೊಂದು ಮಾತು, ನೀನು ನನ್ನ ಹೆಂಡತಿ ಮಕ್ಕಳೊಂದಿಗೆ ಸಾಮಾನ್ಯ ಮಾನವನಂತೆ ವ್ಯವಹರಿಸಬೇಕು. ನಿನ್ನ ಮಾಯ ಮಂತ್ರಗಳನ್ನು ತೋರಿಸಲಾಗದು. ಇದಕ್ಕೆ ಸಮ್ಮತಿಸಿದರೆ ನನ್ನ ಬಳಿ ಕೆಲಸ ಮಾಡು. ಇಲ್ಲ, ನಿನ್ನ ದಾರಿ ನೀನು ಹಿಡಿ" ಎಂದ.

ಅದಕ್ಕೆ ಕೊಂಡದೇವರ ಒಪ್ಪಿಕೊಂಡ. ಕೊಂಡನ ಸಲಹೆಯಮೇರೆಗೆ ವೀರಭಾನು ಮತ್ತೊಂದು ಜೊತೆ ಎತ್ತುಗಳನ್ನು ಕೊಂಡು ಕೊಂಡನು. ಅವುಗಳ ಸಹಾಯದಿಂದ ಬಂಜರು ಭೂಮಿಯನ್ನೆಲ್ಲಾ ಉಳುಮೆ ಮಾಡಿದನು. ಕೊಂಡನದು ಆನೆ ಬಲ. ಎಷ್ಟು ದುಡಿದರೂ ಅವನಿಗೆ ಆಯಾಸವಾಗುತ್ತಿರಲಿಲ್ಲ. ಆ ವರ್ಷ ಪಿಶಾಚಿಯದಿಬ್ಬದಲ್ಲಿ ಚಿನ್ನದ ಬೆಳೆ ಬೆಳೆಯಿತು. ಊರಿನವರೆಲ್ಲ ವೀರಭಾನುವನ್ನು ನೋಡಿ ಅಸೂಯೆಗೊಂಡರು.

ಒಂದು ದಿನ ಗೌರಿ ಕೊಂಡನಿಗೆ ಮಕ್ಕಳನ್ನು ನೋಡಿಕೊಳ್ಳುವಂತೆ ಹೇಳಿ, ತನ್ನ ಸ್ನೇಹಿತ ಳೊಬ್ಬಳ ಮನೆಗೆ ಹೋದಳು. ವೀರಭಾನು ಪೇಟೆಗೆ ಹೋಗಿದ್ದನು. ಅವನು ಮನೆಯಲ್ಲಿ ಕಾಲಿಟ್ಟಾಗ ಮಕ್ಕಳು ಗಾಬರಿಯಿಂದ ಕಿರಿಚಿ ಕೊಳ್ಳುತ್ತಿದ್ದ ಸದ್ದು ಕೇಳಿಸಿತು. ಅವನು ಗಾಬರಿ ಯಿಂದ ಒಳಗೆ ಹೋಗಿ ನೋಡಲು ಹುಡುಗರು ಗೂಡೆಯ ಹಿಂದೆ ಹೋಗಿ "ಅಪ್ಪಾ, ಅಮ್ಮಾ" ಎಂದು ಅರಚುತ್ತಿರುವರು. ಕೂಲಿಗಾರ ಕೊಂಡ ಪಕಪಕ ನಗುತ್ತಿದ್ದ.

"ಏನು ಮಾಡುತ್ತಿದ್ದೀಯೋ ಕತ್ತೆ" ಎಂದು ಕನಲಿದ ವೀರಭಾನು.

"ಮಕ್ಕಳನ್ನು ಆಡಿಸುತ್ತಿದ್ದೇನೆ ಸ್ವಾಮಿ!" ಎಂದ ಕೊಂಡ.

"ಅಲ್ಲಾ ಅಪ್ಪಾ, ಅವನು ತನ್ನ ತಲೆಯನ್ನು ಸಿಂಹದ ತಲೆ, ಕತ್ತೆ ತಲೆಯಂತೆ ಮಾಡಿ ನಮ್ಮನ್ನು ಹೆದರಿಸುತ್ತಿದ್ದಾನೆ" ಎಂದವು ಮಕ್ಕಳು.

ವೀರಭಾನು ಮಕ್ಕಳಿಗೆ ಧೈರ್ಯ ಹೇಳಿ "ಹೊರಗೆನಡಿ. ಮತ್ತೆ ನನಗೆ ನಿನ್ನ ಮುಖ ತೋರಿಸಬೇಡ" ಎಂದು ಕೊಂಡನನ್ನು ಅಲ್ಲಿಂದ ಹೊರಗೆಳೆದು ಕೊಂಡು ಹೋದ. ಕೊಂಡ ಸಂಭಾವಿತನಂತೆ ಹೊರಗೆಬಂದ. ಹೊರಗೆಬಂದ ನಂತರ "ಏಕೆಹೋಗಬೇಕು?" ಎಂದು ಕೇಳಿದ.

"ನನ್ನ ಮಕ್ಕಳನ್ನು ಭಯಪಡಿಸಿದ್ದೇಕೆ? ಮೊದಲೆ ಹೇಳಿರಲಿಲ್ಲವೇ? ನೀನು ನನ್ನ ಹತ್ತಿರ ಇನ್ನುಮುಂದೆ ಕೆಲಸಮಾಡುವ ಅಗತ್ಯವಿಲ್ಲ" ಎಂದ ವೀರಭಾನು ಗಂಭೀರವಾಗಿ.

"ನಾನಿಲ್ಲದೆ ಆ ಹೊಲವನ್ನೆಲ್ಲಾ ನೀನೊಬ್ಬನೇ ಬೇಸಾಯ ಮಾಡಬಲ್ಲೆಯಾ" ಎಂದ ಕೊಂಡ.

"ನನ್ನ ಕೈಲಾದಷ್ಟು ಮಾಡುವೆ. ನೀನು ಮೊದಲು ನಡಿ" ಎಂದು ಸಿಟ್ಟಿನಿಂದ ನುಡಿದ.

"ನಾನು ಹೋಗುವುದಿಲ್ಲ. ಏನು ಮಾಡುವೆಯೋ ಮಾಡು? ನಾನು ಯಾರೆಂಬುದು ನಿನಗೆ ತಿಳಿದಿದೆ" ಎಂದು ಬಲವಾಗಿ ಸವಾಲು ಹಾಕಿದ ಕೊಂಡ.

ಮರುಕ್ಷಣವೇ ವೀರಭಾನು ಅವನಮೇಲೆ ಬಿದ್ದನು. ಇಬ್ಬರು ಬಹಳಹೊತ್ತು ಹೊಡೆದಾಡಿ



ದರು. ಕೊನೆಗೆ ವೀರಭಾನು ಕೊಂಡನನ್ನು ಕೆಳಗೆ ಬೀಳಿಸಿ ಅವನ ಎದೆಯಮೇಲೆ ಕುಳಿತು ಮುಷ್ಟಿಯಿಂದ ಹೊಡೆಯುತ್ತಿದ್ದನು. ಕೊಂಡ ಗಹಗಹಿಸಿ ನಗುತ್ತಿದ್ದನು. ಅವನ ನಗು ವೀರಭಾನುವನ್ನು ಮತ್ತಷ್ಟು ಕೆರಳಿಸಿತು. "ನಿನಗೆ ನಗಾಟವಾಯಿತಲ್ಲವೇ? ಇನ್ನೂ ಏಟು ಬೇಕೆನಿಸುತ್ತಿದೆಯೇನು" ಎಂದು ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಬಲವಾಗಿ ಗುದ್ದುತ್ತಿದ್ದನು.

"ಸಾಕು ಸಾಕು. ನೀನೇ ಗೆದ್ದೆ. ನನಗೆ ಏಳಲು ಸ್ವಲ್ಪ ಅವಕಾಶಕೊಡು." ಎಂದು ದೈನ್ಯದಿಂದ ಕೇಳಿದ ಕೊಂಡ.

ತರುವಾಯ ಕೊಂಡನು ಎದ್ದುನಿಂತು ಮತ್ತೊಮ್ಮೆನಕ್ಕು "ನಿನ್ನಂತಹವನನ್ನು ನಾನೆಲ್ಲೂ ನೋಡಿಲ್ಲ. ನಿನ್ನಿಷ್ಟದಂತೆಯೇ ನಾನು ಹೊರಟು

ಹೋಗುತ್ತೇನೆ. ಇನ್ನು ನಿನ್ನ ಹೊಲವನ್ನು ನೀನೇ ನೋಡಿಕೊ. ಪಿಶಾಚಗಳೇನಾದರು ನಿನಗೆ ತೊಂದರೆ ಕೊಡಲು ಬಂದರೆ 'ಕೊಂಡಾ' ಎಂದೊಮ್ಮೆ ಕೂಗು. ನಾನು ಬಂದು ಅವುಗಳನ್ನು ವಿಚಾರಿಸಿ ಕೊಳ್ಳುತ್ತೇನೆ" ಎಂದು ಹೇಳಿ ಅದೃಶ್ಯನಾದನು.

ಅಂದಿನಿಂದ ಯಾವ ಪಿಶಾಚಿಯೂ ವೀರ ಭಾನುವಿನ ತಂಟೆಗೆ ಹೋಗಲಿಲ್ಲ. ಆ ಗ್ರಾಮದ ಹೊಲಗಳಲ್ಲೆಲ್ಲಾ ಅವನದೇ ಅತ್ಯುತ್ತಮವಾದ ಹೊಲವಾಯಿತು. ಗೌರಿ ಮತ್ತು ಮಕ್ಕಳೊಂದಿಗೆ ಅವನು ಸುಖವಾಗಿ ಜೀವಿಸುತ್ತಿದ್ದನು.

ಬೇತಾಳ ಈ ಕಥೆ ಹೇಳಿ "ರಾಜನೇ, ನನಗೊಂದು ಸಂದೇಹ ವಿದೆ. ಕೊಂಡದೇವರ ವೀರ ಭಾನುವಿನ ಹತ್ತಿರ ಕೂಲಿಯವನಾಗಿ ಕೆಲಸ ಮಾಡಲು ಕಾರಣವೇನು? ಹಾಗೆ ಬಂದಾತ ಯಜಮಾನನ ಮೇಲೇಕೆ ತಿರುಗಿ ಬಿದ್ದನು? ಮಾನವಮಾತ್ರನಾದ ವೀರಭಾನು ಕೊಂಡದೇವರನ್ನು ಹೇಗೆ ಸೋಲಿಸಿದ? ಈ ಪ್ರಶ್ನೆಗಳಿಗೆ ಸಮಾಧಾನ ತಿಳಿದುಸಹ ಹೇಳದಿದ್ದರೆ ನಿನ್ನ ತಲೆ ಚೂರು ಚೂರಾದೀತು, ಜೋಕೆ" ಎಂದಿತು.

"ವೀರಭಾನುವಿಗೆ ಪಿಶಾಚಿಗಳ ತೊಂದರೆಯಿಲ್ಲದಂತೆ ಮಾಡಲು ಕೊಂಡದೇವರನು ಅವನ ಬಳಿ ಊಳಿಗ ಮಾಡಲು ಸೇರಿಕೊಂಡನು. ಕೊಂಡನ ಸಹಾಯದಿಂದ ವೀರಭಾನು ಸ್ಥಿತಿವಂತನಾದ. ವೀರಭಾನನಿಗೆ ಧನದಮೇಲೆ ಹೆಚ್ಚು ಆಶೆಯೋ, ಮಡದಿ ಮಕ್ಕಳಮೇಲೆ ಹೆಚ್ಚು ಮಮತೆಯೋ ತಿಳಿಯುವ ಕುತೂಹಲವಾಯಿತು ಕೊಂಡನಿಗೆ, ಅಂತಲೇ ವೀರಭಾನುವಿಗೆ ಕೋಪ ಬರುವಂತೆ ನಡೆದುಕೊಂಡನು. ಕೊಂಡನು ಹೊರಟು ಹೋದರೆ ತನಗಾಗುವ ನಷ್ಟವನ್ನು ಅರಿತಿದ್ದರುಸಹ ವೀರಭಾನು ಅವನನ್ನು ಹೊರಗಟ್ಟಲು ನಿರ್ಧರಿಸಿದ. ಪಿಶಾಚಗಳ ರಾಜನಾದ ಕೊಂಡನಮೇಲೆ ಕೈಮಾಡಿಕೊಂಡ. ಅವನ ದಿಟ್ಟತೆಯನ್ನು ಕಂಡು ಕೊಂಡದೇವರ ಸಂತೋಷಪಟ್ಟು, ತಾನು ಸೋತೆನೆಂದು ಒಪ್ಪಿಕೊಂಡನೇ ಹೊರತು, ನಿಜವಾಗಿ ವೀರಭಾನು ಕೊಂಡದೇವರನ್ನು ಕಾದಾಟದಲ್ಲಿ ಸೋಲಿಸಲಿಲ್ಲ" ಎಂದು ಹೇಳಿದ ತ್ರಿವಿಕ್ರಮ.

ರಾಜನ ಮೌನಭಂಗವಾದ ಕೂಡಲೇ ಬೇತಾಳ ಶವದೊಂದಿಗೆ ಮರವೇರಿತು.





# ವಿಚಿತ್ರ ತೀರ್ಪುಗಳು

ಇರಾನ್‌ದೇಶದ ಒಂದು ನಗರದಲ್ಲಿ ಒಬ್ಬ ವರ್ತಕನಿದ್ದನು. ಆತ ಕಾಲ ಕೂಡಿಬರದೆ ಹಣಕಾಸಿನ ತೊಂದರೆಯಲ್ಲಿ ಸಿಲುಕಿದನು.

ಆರ್ಥಿಕಮುಗ್ಗಟ್ಟಿನಿಂದ ಪಾರಾಗಲು ಆತನು ಒಬ್ಬ ಯಹೂದಿ ಬಡ್ಡಿ ವ್ಯಾಪಾರಿಯ ಬಳಿಗೆ ಹೋಗಿ ನೂರು ದೀನಾರಗಳನ್ನು ಸಾಲ ಕೊಡುವಂತೆ ಕೇಳಿದನು. ಬಡ್ಡಿ ಎಷ್ಟು ಬೇಕೆಂದರೂ ಕೊಡಲು ಸಿದ್ಧನಿರುವುದಾಗಿ ಹೇಳಿದನು. ಆದರೆ ಬಡ್ಡಿಯ ಮಾತು ಬದಿಗಿಟ್ಟು, ಅಸಲು ಬರುವುದೇ ಮೋಸವೆಂದು ಯೋಚಿಸಿ, ಯಹೂದಿ ಸಾಲ ಕೊಡಲು ನಿರಾಕರಿಸಿದನು. ವರ್ತಕನು ಬಿಡಲಿಲ್ಲ. ಯಾವ ಷರತ್ತಿನ ಮೇಲಾದರೂ ಹಣ ಒದಗಿಸಲೇಬೇಕೆಂದು ಒತ್ತಾಯಪಡಿಸಿದನು.

"ನನಗೆ ನಿನ್ನ ಬಡ್ಡಿ ಬೇಕಿಲ್ಲ. ಒಂದೇ ಒಂದು ನಿಬಂಧನೆ ಮಾತ್ರ. ಕೊಟ್ಟ ಅವಧಿಯಲ್ಲಿ ನೀನು ಸಾಲ ತೀರಿಸದಿದ್ದರೆ ನಿನ್ನ ದೇಹದಿಂದ ಒಂದು ಸೇರು ಮಾಂಸ ತೆಗೆದು ಕೊಳ್ಳುತ್ತೇನೆ. ಆಯಿತೇ?" ಎಂದು ಕೇಳಿದನು ಆ ಯಹೂದಿ. "ಸರಿ, ನಾನು ಸಿದ್ಧನಿದ್ದೇನೆ. ಈ ಹಣದಿಂದ ವ್ಯಾಪಾರ ಮಾಡಿ ನೀನು ಕೊಟ್ಟಿರುವ ಅವಧಿಯಲ್ಲಿ ಸಾಲ ತೀರಿಸುವ ಭರವಸೆ ನನಗಿದೆ" ಎಂದ ವರ್ತಕ.

ಯಹೂದಿ ಅದೇಪ್ರಕಾರ ಪತ್ರ ಬರೆದು, ವರ್ತಕನ ಸಹಿ ಹಾಕಿಸಿಕೊಂಡು, ನೂರು ದಿನಾರಗಳನ್ನು ಕೊಟ್ಟನು.

ವರ್ತಕನು ಆ ಹಣದಿಂದ ಸರಕನ್ನು ಕೊಂಡು ವ್ಯಾಪಾರಮಾಡಲು ದೂರ ದೇಶಕ್ಕೆ ಹೋದನು. ಅವನಿಗೆ ಶುಕ್ರದೆಶೆ ಪ್ರಾರಂಭವಾಯಿತು. ವ್ಯಾಪಾರದಲ್ಲಿ ತುಂಬಾ ಲಾಭ ಬಂತು. ತನಗೆ ಬಂದ ಲಾಭದಿಂದ ನೂರು ದಿನಾರಗಳನ್ನು ಹೆಂಡತಿಗೆ ರವಾನಿಸಿ, "ಈ ಹಣವನ್ನು ಯಹೂದಿಗೆ ಕೊಟ್ಟು ನಮ್ಮ ಸಾಲ ತೀರಿಸು" ಎಂದು ಸುದ್ದಿ ಕಳುಹಿಸಿದನು.

ವರ್ತಕನ ಹೆಂಡತಿಗೆ ಗಂಡನು ಬರೆದು ಕೊಟ್ಟಿದ್ದ ಪತ್ರದ ವಿಷಯ ತಿಳಿಯದು. 'ಬಾಕಿ ನಿಧಾನವಾಗಿ ಕೊಡಬಹುದು. ಈ ಹಣವನ್ನು ಮನೆ ಖರ್ಚಿಗೆ ಬಳಸುತ್ತೇನೆ' ಎಂದುಕೊಂಡು ಅದೇಪ್ರಕಾರ ಖರ್ಚು ಮಾಡಿಬಿಟ್ಟಳು.

ಜಿ. ಕೋದಂಡರಾವು



ವರ್ತಕನು ಕೊಂಚಕಾಲದ ನಂತರ ತಾನು ಸಂಪಾದಿಸಿದ ಅಪಾರ ಹಣದೊಂದಿಗೆ ಸ್ವದೇಶಕ್ಕೆ ಹೊರಟನು.

ಈಗ ಅವನ ಅದೃಷ್ಟಚಕ್ರ ತಿರುಗಿತ್ತು. ದಾರಿಯಲ್ಲಿ ಕಳ್ಳರು ಆತನ ಮೇಲೆ ಬಿದ್ದು ಅವನ ಬಳಿಯಿದ್ದ ಹಣವನ್ನೆಲ್ಲಾ ದೋಚಿಕೊಂಡರು. ಆದರೂ ವರ್ತಕನು ದುಃಖಿಸಲಿಲ್ಲ. ಏಕೆಂದರೆ ತನ್ನ ಹೆಂಡತಿ ಯಹೂದಿಯ ಸಾಲವನ್ನು ತೀರಿಸಿಬಿಟ್ಟಿರುತ್ತಾಳೆಂದು ಆತನು ಭಾವಿಸಿದನು.

ಮನೆಗೆ ಬಂದನಂತರವೇ ವರ್ತಕನಿಗೆ ತನ್ನ ಹೆಂಡತಿ ಮಾಡಿದ ಕಾರ್ಯ ತಿಳಿಯಿತು. ಯಹೂದಿಗೆ ಕೊಡಬೇಕಾದ ಹಣ ಹಾಗೇ ಉಳಿದಿತ್ತು. ಅದನ್ನೀಗ ತೀರಿಸಲು ಹಣವಿಲ್ಲ. ಸಾಲ ತೀರಿಸಬೇಕಾದ ಅವಧಿ ಸಹ ಮುಗಿದಿತ್ತು.

ವರ್ತಕನು ಯಹೂದಿಯ ಬಳಿಗೆ ಹೋಗಿ ನಡೆದ ಅಚಾತುರ್ಯವನ್ನು ತಿಳಿಸಿದನು. ಆದರೆ ಯಹೂದಿ ಅದನ್ನು ನಂಬಲಿಲ್ಲ. "ಏನಾದರೇನು? ನನ್ನ ಹಣ ನನಗೆ ಬೇಕು. ನಿನ್ನ ಹತ್ತಿರ ಇಲ್ಲದಿದ್ದರೆ ಪತ್ರದ ಪ್ರಕಾರ ಒಂದು ಸೇರು ಮಾಂಸ ಕೊಯ್ದು ತೆಗೆದುಕೊಳ್ಳುತ್ತೇನೆ" ಎಂದನು.

ವರ್ತಕನು ಎಷ್ಟು ಕೇಳಿಕೊಂಡರೂ ಲಾಭವಿಲ್ಲದಾಯಿತು. ಯಹೂದಿ ವರ್ತಕನಮೇಲೆ ಎಮೆಸ್ಸಾ ನಗರದಲ್ಲಿದ್ದ ಕಾಜಿಗೆ ಫಿರ್ಯಾದು ಮಾಡಿ, ಆತನಬಳಿ ನ್ಯಾಯ ಪಡೆಯಲು ವರ್ತಕನೊಂದಿಗೆ ಹೊರಟನು.

ದಾರಿಯಲ್ಲಿ ಅವರಿಗೊಂದು ಹೇಸರ ಕತ್ತೆ ಎದುರಾಯಿತು. ಅದು ತಪ್ಪಿಸಿಕೊಂಡು ಅವರ ಕಡೆ ಓಡಿ ಬರುತಿತ್ತು. ಅದರ ಯಜಮಾನ ಅದನ್ನು ಅಟ್ಟಿಕೊಂಡು ಬರುತ್ತಿದ್ದ. ಎದುರಾಗಿ ಬರುತ್ತಿದ್ದ ಯಹೂದಿ ಮತ್ತೂ ವರ್ತಕರನ್ನು ಕಂಡು, "ಅಯ್ಯಾ, ಅದನ್ನು ಹಿಂದಕ್ಕೆ ಓಡಿಸಿ" ಎಂದು ಕೂಗಿಕೊಂಡ.

ವರ್ತಕನು ಒಂದು ಕಲ್ಲು ತೆಗೆದು ಹೇಸರ ಕತ್ತೆಯ ಕಡೆ ರೊಯ್ಯನೆ ಎಸೆದನು. ಕಲ್ಲು ಕತ್ತೆಯ ಕಣ್ಣಿಗೆ ಬಿದ್ದು, ಆ ಕಣ್ಣು ಕುರುಡಾಗಿ ಹೋಯಿತು. ಅದರ ಯಜಮಾನ ಕತ್ತೆಯ ಕಣ್ಣನ್ನು ಕುರುಡುಮಾಡಿದ್ದಕ್ಕಾಗಿ ವರ್ತಕನೊಂದಿಗೆ ತಕರಾರು ಹೂಡಿದ. "ಇದು ಬಹಳ ಬೆಲೆ ಬಾಳುವ ಹೇಸರ ಕತ್ತೆ. ನಿನ್ನಿಂದ ಅದರ ಕಣ್ಣು ಕುರುಡಾಯಿತು. ನನಗೆ ವಿಪರೀತ ನಷ್ಟವಾಗಿದೆ. ಅದಕ್ಕೆ ಸರಿಯಾದ ಪರಿಹಾರ ಕೊಟ್ಟು

ಮುಂದೆ ನಡೆ" ಎಂದ. "ಎಲೋ, ಕೇಳು, ಈತನನ್ನು ಪಡೆಯುವ ಅಧಿಕಾರನಿನಗಿಲ್ಲ. ಏಕೆಂದರೆ ಈ ಮೊದಲೇ ಈತ ನನ್ನ ಸಾಲಗಾರ ನಾಗಿದ್ದಾನೆ. ನಾವು ಕಾಜಿಯಬಳಿಗೆ ಹೋಗು ತ್ತಿದ್ದೇವೆ. ಬೇಕಾದರೆ ನೀನೂ ನಮ್ಮೊಂದಿಗೆ ಬಂದು ಕಾಜಿಯವರಿಂದ ನ್ಯಾಯ ಪಡೆ" ಎಂದ ಯಹೂದಿ.

"ಸರಿ, ಹಾಗಾದರೆ ನಡೆಯಿರಿ" ಎಂದು ಹೇಸರ ಕತ್ತೆಯ ಯಜಮಾನ ಅವರೊಂದಿಗೆ ಎಮೆಸ್ಸಾನಗರಕ್ಕೆ ಹೊರಟನು.

ಹೀಗೆ ಅವರು ಹೋಗುತ್ತಿರಲು ಅವರಿಗೆ ದಾರಿಯಲ್ಲಿ ಒಂದು ದೃಶ್ಯ ಕಾಣಿಸಿತು. ಬೆನ್ನಿನ ಮೇಲೆ ಹೊರೆ ತುಂಬಿಕೊಂಡಿದ್ದ ಕತ್ತೆಯೊಂದು ಕೆಸರಿನಲ್ಲಿ ಸಿಕ್ಕಿಕೊಂಡು ಒದ್ದಾಡುತಿತ್ತು. ಅದರ ಯಜಮಾನ ಏನು ಮಾಡಲೂ ತೋರದೆ ದಿಗ್ಮೂಢನಾಗಿದ್ದನು.

ಈ ಮೂವರನ್ನು ಕಂಡು ಆತ ತನಗೆ ಸಹಾಯ ಮಾಡಬೇಕೆಂದು ಕೇಳಿಕೊಂಡನು. ಮೂವರು ಸೇರಿ ಕತ್ತೆಯನ್ನು ಕೆಸರಿನಿಂದ ಹೊರ ಗೆಳೆಯಲು ಸಮ್ಮತಿಸಿದರು.

ಯಹೂದಿ ಮತ್ತು ಹೇಸರ ಕತ್ತೆಯ ಯಜ ಮಾನ ಕತ್ತೆಯಮೇಲಿದ್ದ ಹೊರೆಯನ್ನು ತಲಾ ಒಂದೊಂದು ಕಡೆ ಹಿಡಿದುಕೊಂಡರು. ನತ ದೃಷ್ಟ ವರ್ತಕ ಕತ್ತೆಯ ಬಾಲವನ್ನು ಹಿಡಿದು ಬಲವಾಗಿ ಎಳೆದನು. ಆ ಕೂಡಲೇ ಆ ಬಾಲ ಕಿತ್ತು ಅವನ ಕೈಗೆ ಬಂತು! ಅದನ್ನು ನೋಡಿದ ಕೂಡಲೇ "ಅಯ್ಯೋ! ನನ್ನ ಕತ್ತೆಯ ಬಾಲ



ಕಿತ್ತು ಹಾಕಿದೆ. ನನ್ನ ಕತ್ತೆಯ ಸೌಂದರ್ಯ ಹಾಳಾಯಿತು. ನನಗೆ ನಷ್ಟವಾಯಿತು. ಪರಿಹಾರ ದ್ರವ್ಯ ಕೊಟ್ಟು ಮುಂದೆ ಹೆಜ್ಜೆ ಹಾಕು" ಎಂದು ಕತ್ತೆಯ ಯಜಮಾನ ಗಲಾಟೆ ಮಾಡಿದ.

ಉಳಿದವರು ತಮ್ಮೊಂದಿಗೆ ಕಾಜಿಯ ಬಳಿಗೆ ಬರುವಂತೆ ಆತನಿಗೆ ಸಲಹೆ ನೀಡಿದರು.

ನಾಲ್ವರೂ ಒಟ್ಟಿಗೆ ಎಮೆಸ್ಸಾ ನಗರವನ್ನು ಸೇರಿದರು. ರಾಜಬೀದಿಯಲ್ಲಿ ಹೋಗುತ್ತಿರಲು ಅವರು ಒಬ್ಬ ಗಣ್ಯಮನುಷ್ಯನು ಕತ್ತೆಯಮೇಲೆ ಸವಾರಿ ಮಾಡುತ್ತಿದ್ದುದನ್ನು ಕಂಡರು. ಆತನು ಉನ್ನತ ಅಧಿಕಾರಿಯಂತೆ ಕಂಡುಬಂದನು. ಆದರೆ ಮಿತಿಮೀರಿ ಕುಡಿದು, ಯಾವ ಕ್ಷಣವಾ ದರೂ ಕೆಳಗೆ ಬೀಳುವಂತೆ ತೂರಾಡುತ್ತಿದ್ದನು. ವಿಚಾರಿಸಲು ಆತನು ಸರಕಾರದ ತನಿಖೆದಾರ

ನೆಂದು ತಿಳಿಯಿತು. ಹಾಗೆಯೇ ಮತ್ತಷ್ಟು ದೂರ ಹೋಗಲು ಅವರೊಂದು ಮಸೀದಿಯ ಬಳಿಗೆ ಬಂದರು. ಅಲ್ಲಿ ನೂರಾರು ಜನ ಕೂಡಿ ಕೊಂಡು ನಿರ್ಭೀತಿಯಿಂದ ಜೂಜಾಡುತ್ತಿದ್ದರು.

ಇನ್ನಷ್ಟು ದೂರ ಹೋಗಲು, ನಾಲ್ವರು ಚಟ್ಟವನ್ನು ಹೊತ್ತುಕೊಂಡು ಹೋಗುವುದು ಅವರ ಕಣ್ಣಿಗೆ ಬಿತ್ತು. ಅದರಲ್ಲಿರುವ ಆಶ್ಚರ್ಯವೇನೆಂದರೆ ಚಟ್ಟದ ಮೇಲಿದ್ದುದು ಶವವಲ್ಲ, ಜೀವಂತ ಮನುಷ್ಯ! ಅವನು ಒಂದೇಸವನೆ ಗೋಳಿಡುತ್ತಿದ್ದ. ಬೀದಿಯಲ್ಲಿ ಸಂಚರಿಸುತ್ತಿರುವವರನ್ನು ಕುರಿತು, "ಅಯ್ಯಾ, ನೀನೇ ಹೇಳು. ನಾನು ಸತ್ತುಹೋದೆನೆಂದು ನನ್ನನ್ನು ಮಸಾಣಕ್ಕೆ ತೆಗೆದುಕೊಂಡು ಹೋಗುತ್ತಿದ್ದಾರೆ. ಇದೇನನ್ಯಾಯ! ನಾನು ಸತ್ತುಹೋಗಿದ್ದೇನೆಯೆ? ಯಾರಾದರೂ ಹೇಳಿರಪ್ಪಾ!" ಎಂದು ಕೇಳುತ್ತಿದ್ದ. "ಹೌದು, ನೀನು ಸತ್ತಿರುವುದು ಸತ್ಯ" ಎಂದು ಹೊತ್ತವರು ಹೇಳುತ್ತಿದ್ದರು.

ಈ ವಿಚಿತ್ರಗಳನ್ನು ನೋಡುತ್ತಾ ಅವರು ಅಂದು ರಾತ್ರಿ ಒಂದು ಸತ್ರದಲ್ಲಿ ಕಳೆದು, ಮಾರನೇಯ ದಿನ ಕಾಜಿಯಬಳಿಗೆ ಹೋದರು. "ನಿಮ್ಮ ಆರೋಪಣೆಗಳೇನೋ ಒಬ್ಬೊಬ್ಬರಾಗಿ ಹೇಳಿ" ಎಂದ ಕಾಜಿ.

"ಅಯ್ಯಾ, ಈ ವರ್ತಕ ನನ್ನಬಳಿ ನೂರು ದೀನಾರಗಳನ್ನು ಸಾಲ ಪಡೆದು ಈ ಪತ್ರ ಬರೆದು ಕೊಟ್ಟಿದ್ದಾನೆ. ಅವಧಿಯೊಳಗಾಗಿ ಸಾಲ ತೀರಿಸದಿದ್ದರೆ ಅವನ ಶರೀರದಿಂದ ಒಂದು ಸೇರು ಮಾಂಸ ಕೊಯ್ದುಕೊಳ್ಳ ಬಹುದೆಂಬ ಷರತ್ತಿನಮೇಲೆ ಸಾಲ ಕೊಟ್ಟೆ. ಅವಧಿ ತೀರಿತು.



ಹಣ ಕೊಟ್ಟಿಲ್ಲ. ಮಾಂಸವನ್ನು ಕೊಯ್ದು ಕೊಳ್ಳುವೆನೆಂದರೆ ಅದು ನ್ಯಾಯವಿರುದ್ಧವೆಂದು ಹೇಳುತ್ತಿದ್ದಾನೆ" ಎಂದು ಯಹೂದಿ ಬಿನ್ನಯಿಸಿಕೊಂಡನು.

ಕಾಜಿ ಪತ್ರವನ್ನು ಓದಿಕೊಂಡು, "ಈ ಪತ್ರದ ಪ್ರಕಾರ ನಿನಗೆ ಈತನ ಮಾಂಸ ಒಂದು ಸೇರು ಪಡೆಯುವ ಹಕ್ಕಿದೆ. ಎಲ್ಲಿ ಕತ್ತಿ ತೆಗೆದುಕೊಂಡು ಸಾಣೆ ಹಿಡಿ" ಎಂದ.

ವರ್ತಕನ ಮೈ ಬೆಮರಿತು. ಕೈ ಕಾಲುಗಳು ನಡುಗಿದುವು. ಕತ್ತಿ ಸಾಣೆ ಹಿಡಿದು ವರ್ತಕನ ಮಾಂಸವನ್ನು ಕೊಯ್ಯಲು ಸಿದ್ಧನಾಗಿದ್ದ ಯಹೂದಿಯೊಂದಿಗೆ ಕಾಜಿ ಹೀಗೆಂದ:

"ನಿನಗೆ ಒಂದು ಸೇರು ಮಾಂಸ ಮಾತ್ರ ತೆಗೆದುಕೊಳ್ಳುವ ಹಕ್ಕಿದೆ. ಅದಕ್ಕಿಂತಲೂ ಒಂದು ತೃಣ ಹೆಚ್ಚಾಗಲೀ, ಕಡಿಮೆಯಾಗಲೀ ತೆಗೆದುಕೊಂಡರೆ ಈ ಪತ್ರದಲ್ಲಿರುವ ಷರತ್ತಿಗೆ ಭಂಗವುಂಟಾಗುತ್ತಿದೆ. ಕಾನೂನು ವಿರುದ್ಧವಾಗಿ ವರ್ತಿಸಿದೆಯೆಂದು ನಿನ್ನನ್ನು ಗಲ್ಲಿಗೇರಿಸ ಬೇಕಾದೀತು"

ಯಹೂದಿ ವ್ಯಾಪಾರಿಯ ಮುಖ ಬಿಳಿಚಿ ಕೊಂಡಿತು. "ಅದು ಹೇಗೆ ಸಾಧ್ಯ" ಎಂದ.

"ಅಸಾಧ್ಯವಾದ ಷರತ್ತು ಪತ್ರದಲ್ಲೇಕೆ ಬರೆಯಿಸಿದೆ? ಬೇಕಾದರೆ ನಿನಗೆ ಸೇರಬೇಕಾದ ಒಂದು ಸೇರು ಮಾಂಸ ತೆಗೆದುಕೊ. ಇಲ್ಲ, ಈ ಮನುಷ್ಯನನ್ನು ಗೋಳಾಡಿಸಿ ಇಲ್ಲಿಗೆ ಎಳೆತಂದುದಕ್ಕೆ ಪರಿಹಾರರೂಪವಾಗಿ ಇನ್ನೂರು ದೀನಾರಗಳನ್ನು ಕೊಡು" ಎಂದ ಕಾಜಿ. ಯಹೂದಿ ಬೆಪ್ಪಾಗಿ ಬಿಟ್ಟ. ಬೇರೆ ಮಾರ್ಗವಿಲ್ಲದೆ ಯಹೂದಿ





ಕಣ್ಣೀರು ಬಿಡುತ್ತಾ ಇನ್ನೂರು ದೀನಾರಗಳನ್ನು ಕಾಜಿಯ ಮುಂದಿಟ್ಟನು.

ತರುವಾಯ ಹೇಸರ ಕತ್ತೆಯ ಯಜಮಾನನ ಸರದಿ ಬಂತು. ಆತನು ತನಗೊದಗಿದ ನಷ್ಟ ವನ್ನು ಹೇಳಿ, "ಅಯ್ಯಾ, ನನ್ನ ಹೇಸರ ಕತ್ತೆ ಸಾವಿರ ದೀನಾರಗಳು ಬೆಲೆಬಾಳುವುದು. ಈ ವರ್ತಕನು ಅದರ ಕಣ್ಣನ್ನು ಹಾಳು ಮಾಡಿದು ದರಿಂದ ಅದರ ಬೆಲೆ ಕಡಿಮೆಯಾಗುವುದು. ತಾವು ನ್ಯಾಯ ಹೇಳಬೇಕು" ಎಂದು ವಿಜ್ಞಾಪನೆ ಮಾಡಿಕೊಂಡನು.

"ಈ ಮಾತ್ರಕ್ಕೆ ನನ್ನ ಹತ್ತಿರ ಬರಬೇಕಿತ್ತೇ? ಒಂದು ಗರಗಸದಿಂದ ನಿನ್ನ ಹೇಸರ ಕತ್ತೆಯನ್ನು ಉದ್ದಕ್ಕೆ ಎರಡು ಸಮಭಾಗಗಳಾಗಿ ಕೊಯ್ದು ಬಿಡು. ಕಣ್ಣಿರುವ ಭಾಗ ನೀನಿಟ್ಟುಕೋ. ಕುರುಡಿರುವ ಭಾಗ ವರ್ತಕನಿಗೆ ಕೊಟ್ಟು ಐನೂರು ದೀನಾರಗಳನ್ನು ತೆಗೆದುಕೊ" ಎಂದ.

ಹೇಸರ ಕತ್ತೆಯ ಯಜಮಾನ ಈ ತೀರ್ಪನ್ನು ಕೇಳಿ ಚಕಿತನಾಗಿ, "ಸ್ವಾಮಿ, ನನ್ನ ಕತ್ತೆಗೆ ಈಗಲೂ ಏಳು ನೂರ ಐವತ್ತು ದೀನಾರಗಳು ಸಿಗುತ್ತದೆ. ಆದುದರಿಂದ ನನಗೆ ಯಾವ ಪರಿಹಾರವೂ ಬೇಡ. ನಾನು ಹೋಗುತ್ತೇನೆ ಅಪ್ಪಣೆ ಕೊಡಿ" ಎಂದ.

"ನಿಲ್ಲುನಿಲ್ಲು. ಅನವಸರವಾಗಿ ನ್ಯಾಯಾಸ್ಥಾನಕ್ಕೆ ಎಳೆತಂದುದಕ್ಕೆ ಈ ವರ್ತಕನಿಗೆ ನೀನು ನೂರು ದೀನಾರಗಳನ್ನು ಕೊಡಬೇಕಾದೀತು" ಎಂದ ಕಾಜಿ.

ಹೇಸರಕತ್ತೆಯ ಯಜಮಾನ **ಅದೇಪ್ರಕಾರ** ನೂರು ದೀನಾರಗಳ ಚೀಲವನ್ನು ಕಾಜಿಯ ಮುಂದಿರಿಸಿದನು.

ನಂತರ ಕತ್ತೆಯ ಯಜಮಾನ ಮುಂದೆ ಬಂದು ವರ್ತಕನು ತನ್ನ ಕತ್ತೆಯ ಬಾಲ ಕಿತ್ತುಹಾಕಿದನೆಂದು ಹೇಳಿದನು.

ಕಾಜಿ ಅವನ ದೂರನ್ನು ಕೇಳಿ, "ಈ ಮಾತು ಅಸಂಭವ. ಈತನು ಎಳೆದಾಕ್ಷಣ ನಿನ್ನ ಕತ್ತೆಯ ಬಾಲ ಕಿತ್ತುಕೊಂಡು ಬಂತೆಂದು ಹೇಳಿದರೆ ನಾನು ನಂಬಲಾರೆ. ಅದೋ ಅಲ್ಲಿ ನಿಂತಿರುವ ಕತ್ತೆಯ ಬಾಲವನ್ನು ಎಳೆದು ಕಿತ್ತುಹಾಕು ನೋಡೋಣ" ಎಂದ.

ಫೀಯರ್ಾದಿ ಕಾಜಿಯವರು ತೋರಿಸಿದ ಕತ್ತೆಯ ಬಾಲವನ್ನು ಹಿಡಿದೆಳೆದನು. ಅದು ತನ್ನ ಹಿಂಗಾಲುಗಳಿಂದ ಅವನ ಹಲ್ಲುದುರುವಂತೆ

ಒಡೆಯಿತು. ಈ ರೀತಿ ಮೂರುಬಾರಿ ಪ್ರಯತ್ನಿಸಿ, ಕತ್ತೆಯಿಂದ ಮೂರುಬಾರಿ ಒದೆಯಿಸಿ ಕೊಂಡ ನಂತರ, ಫಿರ್ಯಾದಿ ಯೊಂದಿಗೆ ಕಾಜಿ " ನೋಡಿ ದೆಯಾ, ನಿನ್ನ ಕತ್ತೆಗೆ ಅಸಲು ಬಾಲವೇ ಇದ್ದಿರ ಲಿಕ್ಕಿಲ್ಲ. ನೀನು ಈ ಮನುಷ್ಯನಮೇಲೆ ವಿನಾ ಕಾರಣ ಅಪರಾಧ ಹೊರಿಸಿದುದರಿಂದ ನಿನಗೆ ನೂರು ದೀನಾರ ಜುಲ್ಮಾನೆ ವಿಧಿಸಿರುವೆನು. ಅದನ್ನು ಕೊಟ್ಟು ಹೋಗಿಬಿಡು."

ಪರಿಹಾರಹೊಂದುವ ಬದಲು ಪರಿಹಾರ ಕೊಟ್ಟು ಫೀರ್ಯಾದಿಗಳು ಹೊರಟುಬಿಟ್ಟರು. ಕಾಜಿ ಅವರು ಕೊಟ್ಟ ಹಣದಲ್ಲಿ ಅರ್ಧಭಾಗವನ್ನು ವರ್ತಕನಿಗೆ ಕೊಟ್ಟು ಉಳಿದ ಧನವನ್ನು ತನ್ನ ಕಿಸೆಗೆ ಸೇರಿಸುತ್ತಾ "ನಾನೆಂದೂ ಅನ್ಯಾಯ ಸಹಿಸಲಾರೆ. ನಾನು ಕೊಟ್ಟ ತೀರ್ಪು ನಿನಗೆ ನ್ಯಾಯವಾಗಿ ತೋರಿತೆಂದು ಭಾವಿಸುವೆನು ಏನು ಹೇಳುತ್ತಿ?" ಎಂದನು.

"ಚಿತ್ತ ಚಿತ್ತ, ಆದರೆ ನನಗೆ ಕೆಲವು ಸಂದೇಹ ಗಳಿವೆ. ದಯವಿಟ್ಟು ಅವುಗಳನ್ನು ಪರಿಹಾರ ಮಾಡಬೇಕು" ಎಂದ ವರ್ತಕ.

"ಓ, ಕೇಳು, ನಿನ್ನ ಸಂದೇಹಗಳೇನು?" ಎಂದು ಕೇಳಿದ ಕಾಜಿ.

"ನಾವು ಬರುತ್ತಿರುವಾಗ ಸರಕಾರದ ಉನ್ನತೋದ್ಯೋಗಿಯೊಬ್ಬನು ಕಂಠಪೂರ್ತಿ ಕುಡಿದು ಅಮಲೇರಿ ಕತ್ತೆಯಮೇಲೆ ಕುಳಿತು ತೂರಾಡುತ್ತ ಹೋಗುತ್ತಿದ್ದ. ಅಧಿಕಾರಿ ಆ ರೀತಿ ಹೋಗುವುದು ನಮಗೆ ಆಶ್ಚರ್ಯವನ್ನುಂಟು ಮಾಡಿತು" ಎಂದ ವರ್ತಕ.



"ಈ ನಗರದಲ್ಲಿ ಅನೇಕ ಸಾರಾಯಿ ಗಡಂಗು ಗಳಿವೆ. ಅಂಗಡಿಯವರು ಹಣದಾಶೆಗಾಗಿ ಕೆಲವು ಮತ್ತು ಪದಾರ್ಥಗಳನ್ನು ಬೆರೆಯಿಸುವುದುಂಟು. ಆ ರೀತಿ ಬೆರೆಸುವುದು ಕಾನೂನು ಬಾಹಿರವಾಗಿದೆ. ಅಂತಹ ಕಾನೂನು ವಿರುದ್ಧವಾದ ಕೆಲಸ ಮಾಡ ದಂತೆ ತಡೆಯುವುದು ತನಿಖೆದಾರನ ಕರ್ತವ್ಯ. ಆದರಿಂದ ಆತನು ಪ್ರತಿ ಅಂಗಡಿಗು ಹೋಗಿ ಸ್ವಲ್ಪ ಸ್ವಲ್ಪ ಸಾರಾಯಿ ರುಚಿ ನೋಡುತ್ತಾನೆ. ಮತ್ತು ಪದಾರ್ಥವನ್ನು ಬೆರೆಸಿದ ಸಾರಾಯಿಯ ರುಚಿನೋಡಿ ಆತನಿಗೆ ಅಮಲೇರಿರಬೇಕು. ಈ ವಿಷಯದಲ್ಲಿ ನಾನೇನೂ ಮಾಡುವಂತಿಲ್ಲ" ಎಂದ ಕಾಜಿ.

"ಮಸೀದಿಯಲ್ಲಿ ಜೂಜಾಟ ನಡೆಯುವು ದೆಂದರೇನು" ವರ್ತಕನು ಕೇಳಿದ.

"ಆದು ಕಾನೂನು ಪ್ರಕಾರವೇ ನಡೆಯುತ್ತದೆ. ಮಶೀದಿಗೆ ಹಣದ ಅಭಾವ ಬಹಳವಾಗಿತ್ತು. ಅಂತಲೇ ಅಲ್ಲಿ ಜೂಜಾಡಲು ಅವಕಾಶಕೊಟ್ಟೆವು. ಆದರಿಂದ ವರಮಾನವನ್ನು ಮಶೀದಿಯ ದುರಸ್ತುಗಳಿಗೆ ವಿನಿಯೋಗಿಸಲಾಗುವುದು. ನಿಧಿಯನ್ನು ಕೂಡಿಸಲಾಗುವುದು. ಇದು ಬೇಕೆಂದೇ ಮಾಡಿದ್ದು" ಎಂದ ಕಾಜಿ.

"ಒಬ್ಬ ವ್ಯಕ್ತಿಯನ್ನು ಜೀವಿಶಿರುವಾಗಲೇ ಚಟ್ಟದಮೇಲಿಟ್ಟು ಸ್ಮಶಾನಕ್ಕೆ ತೆಗೆದುಕೊಂಡು ಹೋಗುತ್ತಿದ್ದರು. ಅವನು 'ನಾನು ಜೀವಿಸಿದ್ದೇನೆ, ಸತ್ತಿಲ್ಲ. ನನ್ನನ್ನು ಬಿಡಿಸಿ' ಎಂದು ಬಡಬಡಿಸುತ್ತಿದ್ದ. ಜನ 'ನೀನು ಸತ್ತುಹೋಗಿರುವುದು ನಿಜ' ಎಂದು ಹೇಳುತ್ತಿದ್ದರು. ಈ ಚೋದ್ಯವೇನು?" ವರ್ತಕನು ಕೇಳಿದ.

"ಅವನು ಕಾನೂನು ವಿರುದ್ಧವಾಗಿ ಮಾತನಾಡಿದ್ದಾನೆ. ಎರಡು ತಿಂಗಳಕೆಳಗೆ ಅವನ ಹೆಂಡತಿ ನನ್ನ ಬಳಿಗೆ ಸಾಕ್ಷಿಗಳೊಂದಿಗೆ ಬಂದು ತನ್ನ ಗಂಡನು ಸತ್ತುಹೋಗಿರುವುದಾಗಿಯೂ, ಮತ್ತೆ ವಿವಾಹವಾಗಲು ಅನುಮತಿ ನೀಡಬೇಕೆಂತಲೂ ಅರ್ಜಿಸಲ್ಲಿಸಿದಳು. ಸಾಕ್ಷ್ಯಗಳ ಆಧಾರದಮೇಲೆ ಅವನು ಸತ್ತುಹೋಗಿದ್ದಾನೆಂದು ತೀರ್ಮಾನಿಸಿ ನಾನು ಅನುಮತಿ ಕೊಟ್ಟೆ. ತರುವಾಯ ಅವನು ಬಂದು ತನ್ನ ಹೆಂಡತಿಯನ್ನು ತನಗೆ ಮತ್ತೆ ಕೊಡಿಸಿಕೊಡಬೇಕೆಂದೂ, ತಾನಿನ್ನೂ ಜೀವಿಸಿರುವುದಾಗಿಯೂ ಹೇಳಿದ. ಕಾನೂನು ಪ್ರಕಾರ ಸಾಕ್ಷ್ಯದ ಆಧಾರದಮೇಲೆ ಒಂದು ಸಾರಿ ಸತ್ತಾಯಿತೆಂದು ತೀರ್ಪು ಕೊಟ್ಟನಂತರ ಮತ್ತೆ ಅದನ್ನು ಬದಲಾಯಿಸಲು ಅವಕಾಶವಿಲ್ಲ. ಆದರಿಂದಲೆ ಅವನನ್ನು ಜೀವಸಹಿತ ಹೂಳಿಬಿಡಬೇಕೆಂದು ಆಜ್ಞೆ ಮಾಡಿದ್ದೇನೆ. ಇದು, ನಡೆದ ವಿಷಯ. ಮೊದಲೇ ಸತ್ತವನು ಬದುಕಿರುವುದು ಬರೀಭ್ರಮೆ. ಇನ್ನೇನಾದರೂ ಸಂಶಯವಿದೆಯೆ?" ಎಂದು ಕೇಳಿದ ಕಾಜಿ. "ಏನೂ ಇಲ್ಲ" ಎಂದು ವರ್ತಕನು ಸುಮ್ಮನಾದನು.

ಕಾಜಿಯ ವಿಚಿತ್ರವಾದ ತೀರ್ಪುಗಳನ್ನು ಕೇಳಿ ವರ್ತಕನು ಅಚ್ಚರಿಗೊಂಡನು. ಅಂತಹ ತೀರ್ಪುಗಳಿಂದಲೇ ತನ್ನ ಜೀವ ಇಂದು ಉಳಿಯಿತೆಂದು ಮನಗಂಡು. ಬೇರೇನೂ ಮಾತನಾಡದೆ, ಕಾಜಿಯ ಹತ್ತಿರ ಅಪ್ಪಣೆ ಪಡೆದು, ಮನೆಗೆ ಹಿಂತಿರುಗಿದನು ವರ್ತಕ.



# ಒಡೆತನ-ಬಡತನ

ಹಿಂದಿನ ಕಾಲ ದೊಳಿದ್ದನು ಅವನನು
"ನಂದನ" ಪೆಸರಲಿ ಕರೆಯುವರು।
ಅಂದಿನ ಕಾಲವು ಬಡತನ ಅವನಿಗೆ
ಕುಂದದೆ ಗೇಯುತ ಬಾಳಿದನು ॥೧॥

ಕೆಲಸವಮಾಡುತ ಕೂಲಿಯ ಪಡೆಯಲು
ಅಲಸವ ಮಾಡದೆ ತೆರಳುವನು।
ಮಲಿನದ ಅರಿವೆಯ ಉಡುತಲೆ ಮಡದಿಯು
ಒಲೆಯನು ಹೊತ್ತಿಸಿ ಬೇಸುವಳು ॥೨॥

ಕಾಂತೆಯು ಕೂಡುತ ಜೀವನ ಸಾಗಲು
"ಕಾಂತು"ವ ಗೆಳೆತನ ಮಾಡಿದರು।
"ನಿತ್ಯವು ನಂದದೆ ದೀಪವ ಉರಿಸಲು
ಶಾಂತಿಯು ಪಡೆವುದು"—ವಿವರಿಸಿದ ॥೩॥

ಅಂತೆಯೆ ಮಾಡಲು ಸಿರಿಯದು ಏರಿತು
ಸಂತಸ ಮೂಡಿತು ಮನದಲ್ಲಿ!।
ಅಂತರ ತಿಳಿಯದೆ ನಂದನು ಹೋಗಿ
ಸಂತೆಯ ವಸ್ತುವ ಕೊಳ್ಳುವನು! ॥೪॥

ಸುಂದರ ಮನೆಯನು ಕಟ್ಟಿಸಿ ಮಡದಿಯ
ಚಂದದಿ ಮಕ್ಕಳ ಕೂಡುತಲಿ।
ಬಂದವ ರೆಲ್ಲರ ಬಯ್ಯುತ ನಂದನು
ಅಂದದಿ ಕಾಲವ ನೂಕಿದನು ॥೫॥

ಒಂದಿನ ಧನಿಗಳ ಹಣ ಕಳುವಾಯಿತು
"ನಂದನೆ ಕದ್ದವ" ನೆಂದೆನು ತ।
"ಗುದ್ದಿರಿ ನಂದನ ಹಿಡಿಯಿರಿ ಕಟ್ಟಿರಿ
ಕುಂದಿದ ಇವನಿಗೆ ಸಿರಿಯಾಯ್ತೆ"? ॥೬॥

ಕಣ್ಣಿಗೆ ಕಾಣುವ ತೆರದಲಿ ಅವನನು
ಕೋಣೆಯ ಒಳಗೇ ಹಾಕಿದರು।
ಕಣ್ಣಲಿ ನೀರನು ಸುರಿಸುತ ಕೂಗುತ
ಕಾಣದ ದೇವರ ನೆನಸಿದನು! ॥೭॥

"ಬಡತನ ದಿಂದಲಿ ಬಾಳಿದ ನಿನಗಿದು
ಒಡೆತನ ಸೇರಲು ಹಿರಿತನವೇ?।
ಒಡೆತನ ಬಂದರೆ ವಿನಯವ ತಾಳುತ
ಒಡೆತನ-ಬಡತನ ತಿಳಿದಿರಲಿ!" ॥೮॥

—ಎಂ. ಆರ್. ಭಟ್ಟ, ಪೆರಡಾಲ.



# ಸ್ವಯಂಪ್ರಭೆ

ಗಿರಿದುರ್ಗವೆಂಬ ಪಟ್ಟಣವನ್ನು ಇಂದ್ರಮಿತ್ರನೆಂಬ ರಾಜನು ಆಳುತ್ತಿದ್ದನು. ಆತನಿಗೆ ಬಹಳ ವರ್ಷಗಳ ನಂತರ ಒಬ್ಬ ಮಗಳು ಹುಟ್ಟಿದಳು. ಅವಳ ಹೆಸರು ಸ್ವಯಂಪ್ರಭೆ. ಅವಳಿಗೆ ಚಿಕ್ಕಂದಿನಿಂದ ತಪಸ್ಸುಮಾಡಿ ಮೋಕ್ಷವನ್ನು ಪಡೆಯುವ ಹಂಬಲವಿತ್ತು. ಸ್ವಯಂಪ್ರಭೆಗೆ ವಿವಾಹ ಯೋಗ್ಯವಾದ ವಯಸ್ಸು ಪ್ರಾಪ್ತವಾದಕೂಡಲೇ ಅವಳ ತಂದೆ ದೇಶ ವಿದೇಶಗಳಿಂದ ನೂರಾರು ರಾಜಕುಮಾರರ ಚಿತ್ರಗಳನ್ನು ತರಿಸಿ, ಅವರಲ್ಲಿ ಒಬ್ಬನನ್ನು ಆರಿಸಿ ವಿವಾಹ ಮಾಡಿಕೊಳ್ಳುವಂತೆ ಮಗಳಿಗೆ ತಿಳಿಹೇಳಿದನು. ತನಗೆ ವಿವಾಹ ಮಾಡಿಕೊಳ್ಳಲು ಇಷ್ಟವಿಲ್ಲವೆಂದು ಸ್ವಯಂಪ್ರಭೆ ಖಂಡಿತವಾಗಿ ಹೇಳಿಬಿಟ್ಟಳು.

ಹೀಗಿರಲು ವೀಣಾವತಿ ಎಂಬ ಸುಪ್ರಸಿದ್ಧ ಗಾಯಕಿಯೊಬ್ಬಳು ಊರೂರು ತಿರುಗುತ್ತಾ ಒಂದು ದಿನ ಗಿರಿದುರ್ಗಕ್ಕೆ ಬಂದಳು. ವೀಣಾವತಿಯಬಳಿ ಒಂದು ಅಪೂರ್ವ ವೀಣೆಯಿತ್ತು. ಆ ವೀಣೆಯನ್ನು ನುಡಿಸಿ ಆಕೆ ಅನೇಕ ರಾಜಸಭೆಗಳಲ್ಲಿ ಮನ್ನಣೆ ಪಡೆದಿದ್ದಳು.

ಸ್ವಯಂಪ್ರಭೆಯ ವಿನೋದಕ್ಕಾಗಿ ವೀಣಾವತಿ ಸಂಗೀತಕಛೇರಿ ನಡೆಸಿದಳು. ವೀಣಾವತಿ ತನ್ನ ವೀಣೆಯನ್ನು ಶ್ರುತಿಯಿಟ್ಟು ಒಂದು ಜಾವಳಿ ಹಾಡಲು ಪ್ರಾರಂಭಿಸಿದಳು. ಅದನ್ನು ಕೇಳಿ ಸ್ವಯಂಪ್ರಭೆ ಆಗ್ರಹಪೂರಿತಳಾದಳು. "ಭಕ್ತಿರಸಪ್ರಧಾನವಾದ ದೇವರ ನಾಮ ಹಾಡುವುದನ್ನು ಬಿಟ್ಟು ಜಾವಳಿ ಹಾಡುವೆಯಾ?" ಎಂದು ಆಕ್ಷೇಪಿಸಿ, ಕೋಪದಿಂದ ಎದ್ದು ಬಂದು ವೀಣಾವತಿಯ ವೀಣೆಯನ್ನು ಕಾಲಿನಿಂದ ಒದೆದಳು. ವೀಣೆ ಎರಡು ತುಂಡಾಯಿತು.

ಆ ವೀಣೆ ಏಳು ತಲೆಮಾರುಗಳಿಂದ ವೀಣಾವತಿಯ ವಂಶದಲ್ಲಿತ್ತು. ಆ ವೀಣೆ ಈ ರೀತಿ ಮುರಿದುಹೋಗಲು ವೀಣಾವತಿಗೆ ದುಃಖ ಉಮ್ಮಳಿಸಿ ಬಂತು. "ಅಯ್ಯೋ. ಇಂತಹ ವೀಣೆ ಮತ್ತೊಂದು ಸಿಗುವುದಿಲ್ಲ. ಇದರ ಸಹಾಯದಿಂದ ನಾನು ಅನೇಕ ಅರಸರಿಂದ ಬಹುಮಾನಗಳನ್ನು ಪಡೆದಿದ್ದೇನೆ. ಇಂದಿಗೆ ನನ್ನ ಸಂಗೀತಕ್ಕೆ ಇತಿಶ್ರೀ ಹಾಡಿದಂತಾಯಿತು. ತಾಯಿ, ನಾನೇನು ತಪ್ಪು ಮಾಡಿದೆ? ನೀವೇಕೆ ನನಗಿಂತಹ

ಯಚ್. ಗೋಪಾಲಕೃಷ್ಣ

ಅನ್ಯಾಯವೆಸಗಿದಿರಿ?" ಎಂದು ವೀಣಾವತಿ ಕಣ್ಣೀರು ಹಾಕಲು, ಸ್ವಯಂಪ್ರಭೆಗೆ ಪಶ್ಚಾತ್ತಾಪ ವುಂಟಾಯಿತು. ಅವಳು ತನ್ನ ಕೊರಳಲ್ಲಿದ್ದ ರತ್ನಹಾರವನ್ನು ವೀಣಾವತಿಗೆ ಕೊಟ್ಟು "ತಂಗೀ, ಈ ಹಾರವೂಸಹ ನಮ್ಮ ವಂಶದಲ್ಲಿ ಏಳು ತಲೆಮಾರುಗಳಿಂದಿದೆ. ಬಹಳ ಅಮೂಲ್ಯವಾದ ಹಾರ. ಇದನ್ನು ತೆಗೆದುಕೊಂಡು ಸಮಾಧಾನ ಹೊಂದು. ನಿನಗೆಬೇರೆ ಏನನ್ನೂ ಕೊಡುವ ಪರಿಸ್ಥಿತಿಯಲ್ಲಿ ನಾನಿಲ್ಲ" ಎಂದಳು.

ವೀಣಾವತಿ ರಾಜಕುಮಾರಿಯಿಂದ ಆ ರತ್ನ ಹಾರವನ್ನು ಸ್ವೀಕರಿಸಿ, ಒಡೆದಿದ್ದ ವೀಣೆಯೊಂದಿಗೆ ತನ್ನ ಬಿಡಾರಕ್ಕೆ ಹೋದಳು. ಆ ನಗರದಲ್ಲಿರಲು ಮನಸ್ಸಿಲ್ಲದೆ ಆ ರಾತ್ರಿಯೇ ನೆರೆ ದೇಶಕ್ಕೆ ಪ್ರಯಾಣಹೊರಟಳು. ಆಕೆ ದಾರಿಯಲ್ಲಿ ಸಿಕ್ಕಿದ ಪ್ರತಿ ರಾಜಧಾನಿಯಲ್ಲಿ ಉಳಿದು, ಆ ಆಸ್ಥಾನದಲ್ಲಿರುವ ವೀಣೆಯಮೇಲೆ ನುಡಿಸಿ, ತನ್ನ ಪ್ರೌಢಿಮೆಯನ್ನು ತೋರಿ, ಬಹುಮಾನ ಪಡೆದು ತನ್ನ ಪ್ರಯಾಣ ಮುಂದುವರಿಸುತ್ತಿದ್ದಳು. ಆದರೆ ಆಕೆಗೆ ತನ್ನ ಸ್ವಂತ ವೀಣೆಯ ಮೇಲೆ ನುಡಿದಷ್ಟು ಆನಂದ ಉಂಟಾಗುತ್ತಿರಲಿಲ್ಲ.

ಈ ರೀತಿ ಕೆಲವು ದಿನ ಪ್ರಯಾಣ ಬೆಳೆಸಿ ಒಂದು ದಿನ ವೀಣಾವತಿ ಕಾಳಿಗುಪ್ತವೆಂಬ ಪಟ್ಟಣವನ್ನು ತಲುಪಿದಳು. ಆಕೆ ಒಂದು ಛತ್ರದಲ್ಲಿ ಇಳಿದು, ಸಾಯಂಕಾಲ ಚಿತ್ರಶಾಲೆಯನ್ನು ನೋಡಲು ಹೋದಳು. ಚಿತ್ರಶಾಲೆಯಲ್ಲಿ ಅನೇಕ ಮನೋಹರವಾದ ಚಿತ್ರಗಳಿದ್ದುವು. ವೀಣೆ ನುಡಿಸುತ್ತಿದ್ದಾತನೊಬ್ಬನ ಚಿತ್ರ ಆಕೆಯ



ಮನವನ್ನಾಕರ್ಷಿಸಿತು. ಗಾಯಕನು ನೋಡಲು ತುಂಬಾ ಚೆಲುವಾಗಿದ್ದನು. ಆದರೆ ವೀಣಾವತಿಯ ಮನಸ್ಸನ್ನು ಸೂರೆಗೊಂಡದ್ದು ಆತನ ಚೆಲುವಲ್ಲ; ಆತನು ಬಾರಿಸುತ್ತಿದ್ದ ವೀಣೆ. ಹದಿನಾರಾಣೆ ಅದು ತನ್ನ ಮುರಿದುಹೋದ ವೀಣೆಯನ್ನೇ ಹೋಲುತಿತ್ತು.

ಅದನ್ನು ಕಂಡು ಅಚ್ಚರಿಗೊಂಡು ಚಿತ್ರಶಾಲೆಯಲ್ಲಿದ್ದ ನೌಕರನನ್ನು ಕುರಿತು "ತಮ್ಮಾ, ಈ ಚಿತ್ರ ಯಾರದು?" ಎಂದು ಕೇಳಿದಳು.

"ಇದು ನಮ್ಮ ಮಹಾಪ್ರಭುಗಳ ನಾಲ್ಕನೇ ಕುಮಾರರಾದ ಸಹದೇವರದು" ಎಂದು ಉತ್ತರಕೊಟ್ಟ.

ಈ ವಿಷಯ ತಿಳಿದಕೂಡಲೇ ವೀಣಾವತಿಗೆ ತನ್ನ ಸಂಗೀತಪ್ರಭಾವದಿಂದ ರಾಜಕುಮಾರ



ನನ್ನು ಮೆಚ್ಚಿಸಿ ಆತನಿಂದ ಆ ವೀಣೆಯನ್ನು ಬಹುಮಾನ ಪಡೆಯಬೇಕೆಂಬ ಕೋರಿಕೆಯುಂಟಾಯಿತು. ಆಕೆ ಕೂಡಲೇ ಸಹದೇವನ ಮಂದಿರವನ್ನು ಹುಡುಕಿಕೊಂಡು ಹೋಗಿ, ಆತನನ್ನು ಕಂಡು, ತನ್ನ ಸಂಗೀತವನ್ನು ಕೇಳಬೇಕೆಂದು, ಆತನನ್ನು ಕೇಳಿಕೊಂಡಳು.

ಸಹದೇವನು ಆಕೆಯ ಸಂಗೀತ ಕೇಳಲು ಸಮ್ಮತಿಸಿದನು. ತನ್ನ ವೀಣೆಯನ್ನು ತಂದು ಆಕೆಯಮುಂದಿಟ್ಟನು. ವೀಣೆಯನ್ನು ಶ್ರುತಿ ಮಾಡಿದಕೂಡಲೇ ವೀಣಾವತಿಗೆ ಆನಂದದಿಂದ ಮೈ ಪುಳಕಿತವಾಯಿತು. ಅದು ಹದಿನಾರಾಣೆ ತನ್ನ ವೀಣೆಯಂತೆಯೇ ನುಡಿಯುತಿತ್ತು. ಆಕೆ ಉಲ್ಲಾಸದಿಂದ, ಉತ್ಸಾಹದಿಂದ ಅದ್ಭುತವಾಗಿ ವೀಣೆ ನುಡಿಸಿದಳು.

ಆಕೆಯ ವೀಣಾವಾದನವನ್ನು ಕೇಳಿ ಸಹದೇವನು ಮುಗ್ಧನಾದನು. "ಭೇಷ್, ನಿಮಗೇನು ಬಹುಮಾನ ಬೇಕೋ ಹೇಳಿ. ನಿಮ್ಮ ಸಂಗೀತ ಸೊಗುಸಾಗಿತ್ತು" ಎಂದನು.

ವೀಣಾವತಿ ಸ್ವಯಂಪ್ರಭೆಯ ವಿಷಯವನ್ನು ಹೇಳಿ ಎರಡು ಭಾಗವಾಗಿ ಒಡೆದುಹೋಗಿದ್ದ ತನ್ನ ವೀಣೆಯನ್ನು ತೋರಿಸಿ, "ನಿಮ್ಮ ವೀಣೆಯ ಮೇಲೆ ನುಡಿಸುವ ವರೆವಿಗೂ ನನ್ನ ಕೈ ಮುರಿದು ಹೋದಂತಿತ್ತು. ದಯವಿಟ್ಟು ನಿಮ್ಮ ವೀಣೆಯನ್ನು ನನಗೆ ದಯಪಾಲಿಸುವಿರಾ?" ಎಂದು ದೈನ್ಯಪೂರಿತಳಾಗಿ ಕೇಳಿದಳು.

ಸಹದೇವನು ವೀಣಾವತಿಯ ಮುರಿದು ಹೋಗಿದ್ದ ವೀಣೆಯನ್ನು ಪರೀಕ್ಷಿಸಿ "ನಾನು ಇದನ್ನು ಮತ್ತೆ ಜೋಡಿಸಿ ಕೊಡುತ್ತೇನೆ. ನೀವು ಚಿಂತಿಸಬೇಡಿ" ಎಂದನು. ಸಹದೇವನು ಅಂದು ರಾತ್ರಿಯೆಲ್ಲಾ ಕಷ್ಟಪಟ್ಟು ವೀಣೆಯನ್ನು ಸರಿಪಡಿಸಿ, ಮಾರನೇಯ ದಿನ ವೀಣಾವತಿ ಬಂದ ಕೂಡಲೇ ಆಕೆಗೆ ಕೊಟ್ಟನು. ಜೋಡಿಸಿದ ಗುರುತು ಇಂತಿಷ್ಟೂ ಕಾಣದಂತೆ ತನ್ನ ವೀಣೆಯನ್ನು ಸರಿಪಡಿಸಿದ ರಾಜಕುಮಾರನ ಕುಶಲತೆಯನ್ನು ಕಂಡು ಬೆರಗಾಗಿ, ವೀಣಾವತಿ ರತ್ನಹಾರವನ್ನು ಆತನಿಗೆ ಕೊಟ್ಟು "ಇದನ್ನು ನಾನು ನನ್ನ ವೀಣೆಗೆ ಪ್ರತಿಯಾಗಿ ಸ್ವಯಂಪ್ರಭೆಯಿಂದ ಪಡೆದೆ. ನೀವು ನನ್ನ ವೀಣೆಯನ್ನು ಮತ್ತೆ ನನಗೆ ದಯಪಾಲಿಸಿದಿರಿ. ಅದರಿಂದ ನೀವು ಈ ಹಾರವನ್ನು ಸ್ವೀಕರಿಸಬೇಕು" ಎಂದಳು. ವೀಣಾವತಿ ಹೊರಟುಹೋದನಂತರ ಸಹ ದೇವನು ಸ್ವಯಂ



ಪ್ರಭೆಯನ್ನು ಕುರಿತು ಯೋಚಿಸುತ್ತಿದ್ದನು. ಸ್ವಯಂಪ್ರಭೆ ಅಪೂರ್ವ ಸುಂದರಿಯೆಂದೂ, ಆಕೆಯ ಮನಸ್ಸು ವೈರಾಗ್ಯದಕಡೆ ಹೊರಳಿದೆ ಯೆಂದೂ ವೀಣಾವತಿ ಆತನೊಂದಿಗೆ ಹೇಳಿದ್ದಳು. ಹೇಗಾದರೂ ಸ್ವಯಂಪ್ರಭೆಯನ್ನು ವಿವಾಹ ವಾಗಲು ಸಹದೇವನು ನಿರ್ಧರಿಸಿದನು.

ಇಲ್ಲಿ ಹೀಗಿರಲು ಅತ್ತ ಇಂದ್ರಮಿತ್ರನು ತನ್ನ ಮಗಳ ಕೊರಳಲ್ಲಿ ಹಾರವಿಲ್ಲದಿರುವುದನ್ನು ಕಂಡು. ಮಗಳಿಂದ ನಡೆದ ವಿಷಯವನ್ನೆಲ್ಲಾ ತಿಳಿದುಕೊಂಡು ತುಂಬಾ ಪೇಚಾಡಿದನು. ಏಕೆಂದರೆ ಆ ಹಾರ ಅವರ ವಂಶದಲ್ಲಿ ತಲಾಂತರ ಗಳಿಂದಿತ್ತು. ಅದು ತುಂಬಾ ವಿಶಿಷ್ಟವುಳ್ಳ ಹಾರ. ಅದನ್ನು ಧರಿಸಿದಾತನು ಗಿರಿದುರ್ಗದ ಅರಸ ನಾಗುವನೆಂದು ಪ್ರತೀತಿ. ಈ ವಿಷಯವರಿಯದೆ ಸ್ವಯಂಪ್ರಭೆ ಅದನ್ನು ವೀಣಾವತಿಗೆ ಕೊಟ್ಟು ಬಿಟ್ಟಿದ್ದಳು.

ರಾಜನಿಗೆ ದಿಕ್ಕೇ ತೋರದಾಯಿತು. ವೀಣಾ ವತಿ ಎಲ್ಲಿದ್ದರೂ ಹುಡುಕಿ ತರಬೇಕೆಂದು ಭಟ ರನ್ನು ನಾನಾದಿಕ್ಕುಗಳಿಗೆ ಕಳುಹಿಸಿದನು.

ರಾಜಭಟರು ಅಲ್ಲಲ್ಲಿ ವಿಚಾರಿಸುತ್ತಾ ಹೋಗಿ ವೀಣಾವತಿಯಿದ್ದ ಸ್ಥಳವನ್ನು ಗೊತ್ತುಹಚ್ಚಿದರು. ಆಕೆ ಅವರೊಂದಿಗೆ ಇಂದ್ರಮಿತ್ರನ ಆಸ್ಥಾನಕ್ಕೆ ಬಂದು, "ಮಹಾಪ್ರಭು, ನಿಮ್ಮ ಮಗಳು ಕೊಟ್ಟ ರತ್ನಹಾರ ನನ್ನಬಳಿ ಈಗಿಲ್ಲ. ಕಾಳಿ ಗುಪ್ತ ನಗರದ ರಾಜಕುಮಾರ ಸಹದೇವನು ನನ್ನ ವೀಣೆಯನ್ನು ಸರಿಪಡಿಸಿ ಕೊಡಲು, ನಾನು ಆ ರತ್ನಹಾರವನ್ನು ಆತನಿಗೆ ಕೊಟ್ಟುಬಿಟ್ಟೆನು"



ಎಂದು ನಡೆದ ಸಂಗತಿಯನ್ನು ತಿಳಿಸಿದಳು. ಮಹಾರಾಜನು ಸದ್ಯಕ್ಕೆ ವೀಣಾವತಿ ಸೆರೆ ಮನೆಯಲ್ಲಿರಬೇಕೆಂದು ಆಜ್ಞಾಪಿಸಿದನು. ಭಟ ರನ್ನು ಕಾಳಿಗುಪ್ತನಗರಕ್ಕೆ ಅಟ್ಟಿದನು. ಅವರು ಕೆಲವು ದಿನಗಳನಂತರ ಹಿಂತಿರುಗಿ ಬಂದು, "ಮಹಾಪ್ರಭು, ರಾಜಕುಮಾರ ಸಹದೇವನು ಕೆಲವು ದಿನಗಳಿಂದ ಕಾಳಿಗುಪ್ತ ನಗರದಲ್ಲಿಲ್ಲ ವಂತೆ. ಆತನು ಎಲ್ಲಿಗೆ ಹೋದನೋ ಯಾರೂ ಅರಿಯರು" ಎಂದು ಹೇಳಿದರು.

ಕೈಬಿಟ್ಟು ಹೋದ ಹಾರ ಮತ್ತೆ ಸಿಗದಿರಲು ರಾಜನು ಉದ್ವಿಗ್ನಗೊಂಡನು. ಹೀಗಿರಲು ನಗರದಾಚೆಯಿದ್ದ ರತ್ನಗಿರಿ ಪರ್ವತದಮೇಲಿರುವ ದೇವಾಲಯದಲ್ಲಿ ಅದ್ವೈತ ಶಿವಾನಂದಯೋಗಿ ಗಳು ತಪಸ್ಸುಮಾಡುತ್ತಿರುವರೆಂಬ ಸುದ್ದಿ ರಾಜ

ನಿಗೆ ತಿಳಿಯಿತು. ಕೂಡಲೇ ತನ್ನ ಪರಿವಾರ ಸಮೇತವಾಗಿ ಆ ಯೋಗಿಯ ದರ್ಶನವನ್ನು ಪಡೆಯಲು ಹೊರಟನು.

ಆ ಯೋಗಿ ಮತ್ತೆ ಯಾರೂ ಅಲ್ಲ; ಕಾಳಿ ಗುಪ್ತ ನಗರದ ರಾಜಕುಮಾರ ಸಹದೇವ. ಹೇಗಾದರೂ ಮಾಡಿ ಸ್ವಯಂಪ್ರಭೆಯನ್ನು ಮದುವೆಯಾಗುವ ಯೋಚನೆಯಿಂದ ಛದ್ಮವೇಷ ಧರಿಸಿ ಅಲ್ಲಿಗೆ ಬಂದಿದ್ದನು. ಈ ವಿಷಯವನ್ನು ಆತನಹೊರತು ಮತ್ತೆ ಯಾರೂ ಅರಿಯರು.

ರಾಜನು ಬಂದು ನಮಸ್ಕಾರಮಾಡಿದ ಕೂಡಲೇ ಯೋಗಿಯ ವೇಷದಲ್ಲಿದ್ದ ಸಹದೇವ, "ರಾಜನೇ, ನೀನು ಬಂದಿರುವ ಉದ್ದೇಶವನ್ನು ದಿವ್ಯದೃಷ್ಟಿಯಿಂದ ಅರಿತಿದ್ದೇವೆ. ನಿನ್ನ ಮಗಳು ಕಳೆದುಕೊಂಡ ರತ್ನಹಾರ ಆಕೆಗೆ ಮತ್ತೆ ಸೇರುವಂತೆ ನಾವು ಅನಗ್ರಹಿಸಿದ್ದೇವೆ. ನೀನು ಚಿಂತಿಸಬೇಡ. ನಿನ್ನ ಮಗಳ ವಿವಾಹ ಶೀಘ್ರದಲ್ಲೇ ಆಗುವುದು. ನೀನು ನಿಶ್ಚಿಂತೆಯಿಂದಿರು" ಎಂದನು.

ರಾಜನಿಗೆ ತಲೆಯಮೇಲಿದ್ದ ಭಾರಿ ಹೊರೆಯನ್ನು ಕೆಳಗಿಳಿಸಿದಂತಾಯಿತು. "ಮಹಾನುಭಾವ, ನಾನು ತಮಗೆ ಕೃತಜ್ಞನಾಗಿದ್ದೇನೆ. ನನ್ನ ಮಗಳು ವಿವಾಹವಾಗಲು ಸುತರಾಂ ಒಪ್ಪುತ್ತಿಲ್ಲ. ಅವಳ ಮನಸ್ಸು ಬದಲಾಯಿಸುವಂತೆ ಅನುಗ್ರಹಿಸಬೇಕು" ಎಂದು ಬೇಡಿಕೊಂಡನು. ನಂತರ ತನ್ನ ಪರಿವಾರದೊಂದಿಗೆ ಅರಮನೆಗೆ ಹಿಂತಿರುಗಿದನು.

ರಾಜನು ತನ್ನ ಮಗಳನ್ನು ಕರೆದು, "ಮಗೂ, ರತ್ನಗಿರಿ ಪರ್ವತಕ್ಕೆ ಮಹಾಯೋಗಿಗಳೊಬ್ಬರು ಬಂದಿದ್ದಾರೆ. ಅವರ ತಪಶ್ಶಕ್ತಿ



ಅದ್ಭುತವಾದುದು. ನೀನೊಂದುಬಾರಿ ಅವರ ದರ್ಶನಮಾಡಿಕೊಂಡು ಬರಬಾರದೇ?" ಎಂದನು. ತಂದೆಯ ಮಾತನ್ನು ಕೇಳಿ ಸ್ವಯಂಪ್ರಭೆಗೆ ಯೋಗಿಯನ್ನು ಕಾಣಬೇಕೆಂಬ ಕುತೂಹಲ ಜನಿಸಿತು. ಆತನಿಂದ ಉಪದೇಶ ಪಡೆಯಬೇಕೆಂದು ನಿರ್ಧರಿಸಿದಳು. ಹೇಮ ಎಂಬ ಸಖಿಯೊಂದಿಗೆ ರತ್ನಗಿರಿ ಪರ್ವತಕ್ಕೆ ಹೋಗಿ ಯೋಗಿಯಮುಂದೆ ಸಾಷ್ಟಾಂಗ ಬಿದ್ದಳು.

ಆಗ ಸಹದೇವನು ಅವಳೊಂದಿಗೆ, "ರಾಜಕುಮಾರಿ, ನಿನ್ನ ಕೋರಿಕೆ ನಮಗೆ ತಿಳಿಯಿತು. ನೀನು ಮುಂದಾಲೋಚಿಸದೆ ಒಂದು ರತ್ನಹಾರವನ್ನು ಗಾಯಕಿಯೊಬ್ಬಳಿಗೆ ಬಹುಮಾನವಾಗಿ ಕೊಟ್ಟೆ. ಅದು ಮತ್ತೆ ಸಿಗಲಿಲ್ಲವೆಂದು ವ್ಯಾಕುಲಚಿತ್ತಳಾಗಿರುವೆ. ಹೌದೆ?" ಎಂದು ಅವಳ ಮುಖ ನೋಡುತ್ತಾ ಗಂಭೀರವಾಗಿ ನುಡಿದನು. "ಸ್ವಾಮಿ, ಆ ಹಾರದಿಂದಾಗಿ ಒಬ್ಬ ಗಾಯಕಿ ಅನ್ಯಾಯವಾಗಿ ಸೆರೆಮನೆಯಲ್ಲಿ ಕೊಳೆಯುತ್ತಿದ್ದಾಳೆ. ನಿರಪರಾಧಿನಿಯಾದ ಆಕೆಯ ವಿಮುಕ್ತಿಗಾದರೂ ಆ ಹಾರ ಮತ್ತೆ ನಮಗೆ ಸಿಗುವ ಉಪಾಯ ಹೇಳಿ" ಎಂದು ಅಂಗಲಾಚಿದಳು ಸ್ವಯಂಪ್ರಭೆ.

ಸಹದೇವನು ಕಣ್ಣು ಮುಚ್ಚಿ, ಕಮಂಡಲದಲ್ಲಿ ಕೈ ಹಾಕಿ ರತ್ನಹಾರವನ್ನು ತೆಗೆದು ಸ್ವಯಂಪ್ರಭೆಗೆ ಕೊಡುತ್ತಾ, "ಇದೊ, ನಿನ್ನ ರತ್ನಹಾರ. ನಿಮ್ಮ ತಂದೆಗೆ ತೋರಿಸಿ, ಆ ನಿರಪರಾಧಿನಿಯನ್ನು ಸೆರೆಯಿಂದ ಬಿಡಿಸು. ನಿನಗೆ ಶೀಘ್ರದಲ್ಲೇ ವಿವಾಹವಾಗುವುದು. ಇದು ನಮ್ಮ ಆಶೀರ್ವಾದ" ಎಂದನು.





ವಿವಾಹವನ್ನು ಕುರಿತು ಪ್ರಸ್ತಾಪಿಸಿದ ಕೂಡಲೇ ಸ್ವಯಂಪ್ರಭೆ ಚಕಿತಳಾಗಿ, "ಸ್ವಾಮಿ, ನನಗೆ ವಿವಾಹ ಬೇಡ. ಈ ಜನ್ಮ ಸಾರ್ಥಕವಾಗಲು ದಾರಿ ತೋರಿ. ಮದುವೆಯಾಗುವಂತೆ ನನ್ನ ತಂದೆ ದಿನಾ ಪ್ರಾಣ ಹಿಂಡುತ್ತಿದ್ದಾರೆ. ನೀವಾದರೂ ಮುಕ್ತಿಮಾರ್ಗ ತೋರುವಿರೆಂಬ ಆಶೆಯಿಂದ ಇಲ್ಲಿಗೆ ಧಾವಿಸಿಬಂದೆ" ಎಂದಳು.

"ನಿನಗೆ ವಿವಾಹವಾಗುವುದು ತಪ್ಪುವಂತಿಲ್ಲ. ಆದರೆ ನಿನ್ನ ವೈರಾಗ್ಯವು ಕೆಡದಂತೆ ವಿವಾಹವಾಗಬೇಕೆಂದರೆ ಒಂದೇ ಒಂದು ಉಪಾಯವುಂಟು. ನನ್ನನ್ನು ಮದುವೆಯಾಗು, ಎಲ್ಲಾ ಸರಿಹೋಗುವುದು" ಎಂದ ಸಹದೇವ.

ಸ್ವಯಂಪ್ರಭೆಯ ಮನಸ್ಸಿನಲ್ಲಿ ಸಂಶಯ ಮೂಡಿತು. "ಸರ್ವವನ್ನು ತೊರೆದು ತಪಸ್ಸು



ಮಾಡುವ ತಮಗೆ ವಿವಾಹವೇಕೆ?" ಎಂದು ಕೇಳಿದಳು. "ಹುಚ್ಚಳೇ, ನಿನ್ನನ್ನು ಕಾಪಾಡಲು ನಾನು ವಿವಾಹದ ವಿಷಯವೆತ್ತಿದ್ದೇನೆ. ನಿನಗಿಷ್ಟವಿಲ್ಲದಿದ್ದರೆ ಬೇಡ" ಎಂದು ನಿರ್ಲಿಪ್ತನಾಗಿ ನುಡಿದ ಸಹದೇವ.

ಸ್ವಯಂಪ್ರಭೆಯ ಸಖಿ ಹೇಮ ಯೋಗಿ ಹೇಳಿದಂತೇ ನಡೆಯುವುದೇ ಉತ್ತಮ ಮಾರ್ಗವೆಂತಲೂ, ಈತನನ್ನು ನಿರಾಕರಿಸಿದರೆ ಮತ್ತೆ ಯಾವ ರಾಜಕುಮಾರನನ್ನೋ ವಿವಾಹವಾಗುವ ಪ್ರಸಂಗ ಬಂದು, ಸಂಸಾರದ ತಾಪತ್ರಯದಲ್ಲಿ ಸಿಲುಕಿ ತೊಳಲಾಡಬೇಕಾದೀತೆಂದೂ ಎಚ್ಚರಿಸಿದಳು. ಕಡೆಗೆ ಸ್ವಯಂಪ್ರಭೆ ಅದ್ವೈತ ಶಿವಾನಂದ ಯೋಗಿಯನ್ನು ಮದುವೆಯಾಗಲು ಸಮ್ಮತಿಸಿದಳು. ಅವರಿಬ್ಬರಿಗೆ ಅಲ್ಲೇ ಗಾಂಧರ್ವ ವಿವಾಹವಾಯಿತು. ತರುವಾಯ ಸ್ವಯಂಪ್ರಭೆ ತನ್ನ ಸಖಿಯೊಂದಿಗೆ ಅರಮನೆಗೆ ಹಿಂತಿರುಗಿದಳು. ತಾನು ಬಂದ ಕಾರ್ಯ ನೆರವೇರಿತೆಂದು ಸಂತಸಗೊಂಡು ಸಹದೇವನು ತನ್ನ ವೇಷವನ್ನು ತೊರೆದು ಕಾಳಿಗುಪ್ತ ನಗರಕ್ಕೆ ಹೊರಟುಬಿಟ್ಟನು.

ರತ್ನಗಿರಿ ಮೇಲಿದ್ದ ದೇಗುಲದ ಪೂಜಾರಿಗೆ ಮಾಧವಸ್ವಾಮಿಯೆಂಬ ಅಳಿಯನಿದ್ದ. ದೇವಾಲಯಕ್ಕೆ ಬಂದಿದ್ದ ಯೋಗಿಯ ಸಂದರ್ಶನ ಪಡೆಯಲು ಮಹಾರಾಜನೂ, ನಂತರ ರಾಜಕುಮಾರಿಯೂ ಬಂದುದನ್ನು ಅವನು ಗಮನಿಸಿದನು. ಸಹದೇವನು ತನ್ನ ಕಾಷಾಯ ವಸ್ತ್ರಗಳನ್ನೂ, ಗಡ್ಡ ಮೀಸೆಗಳನ್ನೂ ತೊರೆದು ಹೊರಟುಹೋದುದನ್ನು ಮಾಧವಸ್ವಾಮಿ ಕಣ್ಣಾರೆ

ಕಂಡಿದ್ದನು. ಶಿವಾನಂದಯೋಗಿ ಒಬ್ಬ ಕಪಟ ಸನ್ಯಾಸಿ ಎಂದು ಅವನು ಅರಿತುಕೊಂಡನು.

ಕೂಡಲೇ ಮಾಧವಸ್ವಾಮಿ ಕೆಳಗೆಬಿಟ್ಟಿದ್ದ ಆ ಕಾಷಾಯ ವಸ್ತ್ರಗಳನ್ನು, ಗಡ್ಡಮೀಸೆಗಳನ್ನು ಧರಿಸಿ, ತಪಸ್ಸಾಚರಿಸುವವನಂತೆ ಕಣ್ಣುಮುಚ್ಚಿ ಕುಳಿತುಕೊಂಡನು. ರಾಜನು ಮತ್ತೆ ಬರಬಹುದೆಂದು ಅವನು ನಿರೀಕ್ಷಿಸಿದ್ದನು. ಅವನು ಎಣಿಸಿದ್ದೇನೂ ತಪ್ಪಾಗಲಿಲ್ಲ.

ಯೋಗಿಯ ಪ್ರಭಾವದಿಂದ ತನ್ನ ಮಗಳು ರತ್ನಹಾರವನ್ನು ತಂದಳೆಂದು ತಿಳಿದಕೂಡಲೇ ರಾಜನು ಮತ್ತೆ ಬಂದು ಕಪಟ ಶಿವಾನಂದ ಯೋಗಿಯ ದರ್ಶನ ಪಡೆದನು. ಯೋಗಿಗೆ ಭಕ್ತಿಯಿಂದ ರತ್ನ ಖಚಿತವಾದ ರುದ್ರಾಕ್ಷಿ ಮಾಲೆಯನ್ನು ಕಾಣಿಕೆಯಾಗಿ ಒಪ್ಪಿಸಿ, ಅರಮನೆಗೆ ಹಿಂತಿರುಗಿದನು. ಆತನಿಗೆ ಈ ಹೊಸ ಶಿವಾನಂದಯೋಗಿಯ ವಿಷಯದಲ್ಲಿ ಸಂಶಯ ಬರಲಿಲ್ಲ. ಮಾಧವಸ್ವಾಮಿ ತನ್ನ ಬುದ್ಧಿವಂತಿಕೆಗೆ ತಾನೇ ಮೆಚ್ಚಿಕೊಂಡನು. ಇನ್ನೂ ಇಂತಹ ಅನೇಕ ಬಹುಮಾನಗಳನ್ನು ಪಡೆಯಬಹುದೆಂದು ಅವನು ಭಾವಿಸಿದ್ದನು. ಆದರೆ ಅವನ ಆಶೆ ನಿರಾಶೆಯಾಯಿತು. ಯೋಗಿ ಹೇಳಿದ ಪ್ರಕಾರ ರತ್ನಹಾರ ಸಿಗಲು, ಸ್ವಯಂಪ್ರಭೆಗೂ ಸಹ ಮದುವೆ ಶೀಘ್ರದಲ್ಲೇ ಆಗುವುದೆಂದು ರಾಜನು ಆಶಿಸಿದನು. ಆತನು ವಿವಾಹಪ್ರಯತ್ನಗಳನ್ನು ಭಾರಿ ಪ್ರಮಾಣದಲ್ಲಿ ಮಾಡುತ್ತಿದ್ದನು. ಸ್ವಯಂಪ್ರಭೆ ಇದನ್ನು ಕಂಡು, ತಂದೆಯೊಂದಿಗೆ ತನಗೂ ಶಿವಾನಂದಯೋಗಿಗೂ ಈ ಮೊದಲೇ



ವಿವಾಹವಾಯಿತೆಂದು ತಿಳಿಸಿದಳು. ಮೊದಲು ರಾಜನಿಗೆ ಆಶಾಭಂಗವಾದರೂ, ವಿಧಿಯವೈಚಿತ್ರ್ಯಕ್ಕೆ ತಲೆಬಾಗಿ ಸಮಾಧಾನ ತಂದುಕೊಂಡನು. "ಈ ವಿಷಯ ಮೊದಲೇ ಏಕೆ ತಿಳಿಸಲಿಲ್ಲ? ಈಗ ನಿಮ್ಮಿಬ್ಬರಿಗೆ ಮತ್ತೆ ವೈಭವದಿಂದ ವಿವಾಹ ಮಾಡುವೆನು" ಎಂದನು.

ಕೂಡಲೇ ಸ್ವಯಂಪ್ರಭೆಯ ವಿವಾಹದ ಆಹ್ವಾನ ಪತ್ರಗಳು ಎಲ್ಲ ದೇಶಗಳಿಗೂ ಕಳುಹಿಸಿಕೊಟ್ಟರು. ರಾಜಬಂಧುಗಳು ಮಂಗಳ ವಾದ್ಯದೊಂದಿಗೆ ರತ್ನಗಿರಿ ಪರ್ವತಕ್ಕೆ ಬಂದು ಕಪಟ ಶಿವಾನಂದಯೋಗಿಯನ್ನು ರಾಜಭವನಕ್ಕೆ ಕರೆದುಕೊಂಡು ಹೋದರು. ತನಗೆ ರಾಜಕುಮಾರಿಯನ್ನು ಕೊಟ್ಟು ವಿವಾಹಮಾಡುವರೆಂದು ತಿಳಿದ ಕೂಡಲೇ ಮಾಧವಸ್ವಾಮಿ

ದಿಗ್ಭ್ರಮೆಗೊಂಡನು. ಆಗ ಸ್ವಯಂಪ್ರಭೆಯು ಪರವಾಗಿ ಹೇಮ ಮುದುಮಗನನ್ನು ನೋಡಲು ಬಂದಳು. ಅವನು ಶಿವಾನಂದಯೋಗಿಯಲ್ಲ ವೆಂದು ಆಕೆ ಕೂಡಲೇ ಗ್ರಹಿಸಿದಳು. ಈ ವಿಷ ಯವನ್ನು ಸ್ವಯಂಪ್ರಭೆಯ ಮತ್ತಿತರ ಗೆಳತಿ ಯರಿಗೆ ಹೇಳಿದಳು. ಅವರೆಲ್ಲ ಬಂದು ಮಾಧವ ಸ್ವಾಮಿಯ ಸುತ್ತಲೂ ಸೇರಿಕೊಂಡು, ತಮಾಷೆ ಮಾಡುವ ನೆಪದಿಂದ ಅವನ ಗಡ್ಡ ಮೀಸೆಗ ಳನ್ನು ಕಿತ್ತೆಳೆದರು. ಮೋಸಕೃತ್ಯ ಬಟ್ಟ ಬಯಲಾಯಿತು.

ರಾಜನು ಈ ಸುದ್ದಿಯನ್ನು ಕೇಳಿ ಉರಿದೆದ್ದು ಕಪಟಯೋಗಿಯನ್ನು ಕರೆಯಿಸಿ, "ನೀಚನೇ, ನೀನು ಯಾರು? ನಿಜ ಹೇಳು. ಇಲ್ಲವಾದರೆ ನಿನ್ನನ್ನು ಕಡಿದು ಹಾಕಿಸುತ್ತೇನೆ. ಶಿವಾನಂದ ಯೋಗಿ ಎಲ್ಲಿ?" ಎಂದು ಕೇಳಿದನು.

"ಮಹಾಸ್ವಾಮಿ! ಕ್ಷಮಿಸಿ. ಶಿವಾನಂದ ಯೋಗಿ ಒಬ್ಬ ಕಳ್ಳ. ಅವನು ಕಿತ್ತೆಸೆದ ಗಡ್ಡ ಮೀಸೆಗಳನ್ನು ನಾನಿಟ್ಟುಕೊಂಡೆ. ಅಷ್ಟೇ. ನನ್ನನ್ನು ಬಿಟ್ಟುಬಿಡಿ" ಎಂದು ಮಾಧವಸ್ವಾಮಿ ಅಂಗಲಾಚಿದನು.

ರಾಜನಿಗೆ ಹುಚ್ಚು ಹಿಡಿದಂತಾಯಿತು. ಸ್ವಯಂಪ್ರಭೆಯನ್ನು ವಿವಾಹವಾದ ಮಹಾ ಯೋಗಿ ಯಾರೆಂಬುದನ್ನು ತಿಳಿಯುವ ದಾರಿ ಕಾಣಿಸಲಿಲ್ಲ.

ಇಷ್ಟರಲ್ಲಿ ಸಹದೇವನಿಗೆ ಸ್ವಯಂಪ್ರಭೆಯ ವಿವಾಹದ ವಾರ್ತೆ ತಿಳಿಯಿತು. ಶಿವಾನಂದ ಯೋಗಿಯೆಂದು ಹೇಳಿಕೊಂಡು ಯಾರೋ ಧೂರ್ತನೊಬ್ಬನು ರಾಜಕುಮಾರಿಯನ್ನು ವಿವಾಹವಾಗಲಿರುವನೆಂದು ಊಹಿಸಿ, ಕೂಡಲೇ ಗಿರಿದುರ್ಗಕ್ಕೆ ಹೊರಟನು. ಇಂದ್ರಮಿತ್ರ ರಾಜ ನನ್ನು ಭೇಟಿಮಾಡಿ ನಡೆದುದನ್ನೆಲ್ಲಾ ವಿವರಿಸಿ ದನು. ಮಾಧವಸ್ವಾಮಿ ಸಹದೇವನನ್ನು ತೋರಿಸಿ, ಈತನೇ ಶಿವಾನಂದಯೋಗಿಯಂತೆ ನಟಿಸಿದ ವ್ಯಕ್ತಿಯೆಂದು ಹೇಳಿದನು. ಹೇಮ ಸ್ವಯಂಪ್ರಭೆಯರು ಆತನ ಗುರುತು ಹಿಡಿದರು.

ತನಗೋಸ್ಕರ ಸಹದೇವನು ಪಟ್ಟ ಶ್ರಮ ವನ್ನು ಅರಿತ ಸ್ವಯಂಪ್ರಭೆ ಆತನ ಪತ್ನಿ ಯಾಗಲು ಸಮ್ಮತಿಸಿದಳು. ತನ್ನ ಅಳಿಯ ರಾಜಕುಮಾರನೆಂದು ತಿಳಿದು ಇಂದ್ರಮಿತ್ರನು ಹರ್ಷಿತನಾದನು. ವಿವಾಹವಾಯಿತು.





# ಮಿತ್ರಭೇದ

ತನ್ನ ರೂಪವ ನೋಡಿ
ತಳೆದು ಭೀತಿಯ ಬಾಡಿ
ಮೃಗಗಳೆಲ್ಲಾ ಓಡಿ
ಅಡಗುತಿರೆ, ನರಿ ನೋಡಿ
ಕರೆಯಿ "ತೋ! ಅರೆರರೋ!
ನಿಲ್ಲಿರೋ! ಬನ್ನಿರೋ!
ನಾನಾರು-ಅರಿಯಿರೊ!
ನಿಮ್ಮರಸ ಕಾಣಿರೋ.
ಬೊಮ್ಮ ಕಳುಹಿದ ನನ್ನ
ನಿಮ್ಮರಸ ನಾನಿನ್ನು!
ಎನ್ನಾಜ್ಞೆ ಮೀರಿದರೆ
ಸಾವು ಖಂಡಿತವಿನ್ನು!"
ನರಿಯ ಮಾತನು ಕೇಳಿ
ನಿಜವೆಂದು ಭ್ರಮೆತಾಳಿ
ನರಿಸೇವೆ ಮಾಡುತ್ತ
ನೈವೇದ್ಯ ನೀಡುತ್ತ
ಅದರೆಂಜಲನು ತಿಂದು
ತಾವೆಲ್ಲ ಬದುಕುತ್ತ

ಇರಲೊಂದು ದಿನ ಸಂಜೆ
ನರಿಗ 'ಓ' ಎನ್ನುತ್ತ
ಊಳಿಡಲು ಕೇಳುತ್ತ
ನೀಲನರಿಯೂ ಕತ್ತ
ನೆತ್ತಿ ವೈಮರೆಯುತ್ತ
"ಉಕ್ಕೊವೋ" ಎನ್ನುತ್ತ
ಕೂಗೆ, ಸುತ್ತೂ ಮುತ್ತ
ಮೃಗಗ 'ಓ ನರಿ!' ಎಂದು
ಸೀಳಿದುವು ಅದ ಕೊಂದು!
ಕಥೆ ಹೀಗಿದಾ ಪಶುವಿ
ನೊಡನಾಟ ಬಿಡು ಒಡೆಯ!
ಅದರ ಗುಣವರಿಯಲಿಕೆ
ಗುರುತು ಹೇಳುವೆ ಜೀಯ!
ನಿಮ್ಮ ಬಳಿಯಲಿ ಅದರ
ಕಣ್ಣು ಕೆಂಪಾದೀತು!
ನಿಮ್ಮನ್ನು ದುರುಗುಡುತೆ
ನುಂಗುವೊಲು ನೋಡೀತು!
ಕುಳಿತಲ್ಲೆ ಕುಳ್ಳಿರದೆ

ಅತ್ತಿತ್ತ ಹೊಂಚೀತು !"
ಹೀಗೆಂದು ದಮನಕನು
ಮೃಗರಾಜನೆಡೆಯಿಂದ
ಸಂಜೀವಕನ ತಾವಿ
ಗೈದಿ, ಬಲು ನಯದಿಂದ
ತಲೆವಾಗಿ ಕೈಮುಗಿಯೆ,
ಸಂಜೀವಕನು ಅಂದ :
"ಕ್ಷೇಮವೇ ನರಿಯಣ್ಣ ?"
ದಮನಕನು ಹೀಗೆಂದ :
"ಏನು ಕ್ಷೇಮವೊ ಪೇಳು,
ಸೇವಕರ ಜೀವನಕೆ ?
ನಾಯಿಗಿಹ ಸ್ವಾತಂತ್ರ್ಯ
ನಮಗುಂಟೆ ? ಹೇಳಲಿಕೆ ?
ಧರ್ಮಸಂಕಟದಲ್ಲಿ
ಸಿಕ್ಕಿಬಂದೆನು ಈಗ.
ನಿನ್ನ ಕ್ಷೇಮಕೆ ಪೇಳ್ವೆ,
ತಿಳಿದು ತಪ್ಪಿಕೊ ಬೇಗ !"
ಕೇಳಿ ಸಂಜೀವಕನು
"ಏನಾಯಿತೋ ಹೇಳು !"
ಮತ್ತೆ ದಮನಕನೆಂದ :
"ಸಂಜೀವಕಾ ಕೇಳು,
ಒಡೆಯನ ರಹಸ್ಯವನು
ಹೊರಗುಸಿರ ದಿರಬೇಕು.
ಇದು ಸೇವಕನ ಧರ್ಮ ;



ಈಗ ವಿಚಾರಲೆಬೇಕು.
ನಿನ್ನ ಸ್ನೇಹದಿ ಎನ್ನ
ಹೃದಯ ಕರಗಿಹುದಣ್ಣ!
ಕೇಳಿಮ್ಮ ದೊರೆ ನಿನ್ನ
ಕೊಲಲು ಕಾದಿಹನಣ್ಣ!
ನಂಬಿದಾ ಗೆಳೆಯರನು
ಕೊಲ್ಲಲಾಗದು ಎಂದು
ನಾನೆಷ್ಟೊ ಹೇಳಿದುದು
ವ್ಯರ್ಥವಾಯಿತು ಇಂದು."
ಸಂಜೀವಕನು ಕೇಳಿ
ಮೂರ್ಛೆ-ಸ್ತಂಭನೆ ತಾಳಿ
ಮತ್ತೆ ಎಚ್ಚರ ತಾಳಿ
ನುಡಿದ: "ಓ! ವಿಷಗಾಳಿ!
ದಮನಕಾ ಇದು ಇಜವೆ?
ಮೃಗರಾಜಗಿದು ತರವೆ?
ನಿಜಪೇಳ್ವರಾ ರವರಿಗೆ?
ದುರುಳರೊಡನಿರುವವಗೆ?
ಸರಿಕರಾದವರೊಳೇ
ಸ್ನೇಹಮಾಡಲು ಬೇಕು.
ಈಗರಿತೆ, ಮುಂದೆ ನಾ
ನೆಚ್ಚರಾಗಿರಬೇಕು.
ಅವನ ಸುತ್ತಿನ ಮೃಗಗ
ಳೂದಿದುವು ವಿಷಗಾಳಿ!
ಅರಸ ಚಾಡಿಯ ನುಡಿಗೆ
ಕೊಟ್ಟನೇ ಕಿವಿ ಜೋಲಿ!



ದೊರೆಯ ಸ್ನೇಹವೆ ಎನಗೆ
ದುರ್ನೀತಿಯಾಯ್ತೆ ಹಾ!
ಅರಿಯದೆ ಅಪಾಯದಾ
ದರಿಯಲೇ ನಿಂತೆ ಹಾ!
ಮುಂದಾಗಿ ತಿಳಿಸಿ ನೀ
ಯೆನ್ನ ಉಳಿಸಿದೆ ಮಿತ್ರ!
ಕಲಕಿದ ಕೊಳದಹಾಗೆ
ಕೆಟ್ಟ ದೊರೆಯಾ ಗುಣವ
ತಿಳಿಗೊಳಿಸಲಾದೀತೆ
ಇನ್ನು ದೊರೆಯಾ ಮನವ?
ಕ್ಷುದ್ರಮೃಗಗಳು ಸೇರಿ
ಹಿಂದೊಂದು ಒಂಟೆಯನು
ಮೋಸದಿಂ ಕೊಲ್ಲಿಸಿದ
ಕತೆಯ ಬಲ್ಲೆಯ ನೀನು?



# ಕತ್ತೆಯ ಭವಿಷ್ಯವಾಣಿ

ಸುವರ್ಣನದಿ ತೀರದಲ್ಲಿದ್ದ ಒಂದು ಗ್ರಾಮದಲ್ಲಿ ಒಬ್ಬ ಜೋಯಿಸನಿದ್ದನು. ಅವನು ಪಂಚಾಂಗ ನೋಡಿ, ಭವಿಷ್ಯ ನುಡಿಯುವುದರಲ್ಲಿ ಆ ಸುತ್ತಮುತ್ತಲಿದ್ದ ಸಿದ್ಧಾಂತಿಗಳೆಲ್ಲರಿಗಿಂತಲೂ ಬಹಳ ಮೇಧಾವಿಯೆಂದು ಕೀರ್ತಿಪಡೆದಿದ್ದನು. ಅಲ್ಲದೆ ಜಾತಕ ಬರೆಯುವುದರಲ್ಲಿ ನಿಸ್ಸೀಮನೆಂದು ಜನರಾಡಿಕೊಳ್ಳುತ್ತಿದ್ದರು.

ಜೋಯಿಸರ ಕೀರ್ತಿ ಕ್ರಮೇಣ ರಾಜಧಾನಿಗೂ ಹರಡಿತು. ಅಲ್ಲಿದ್ದ ಉನ್ನತ ಅಧಿಕಾರಿಗಳೆಲ್ಲರೂ ಸೇರಿ ಆತನನ್ನು ರಾಜಧಾನಿಗೆ ಬರಮಾಡಿಕೊಂಡರು. ಕೆಲವು ದಿನಗಳಲ್ಲೇ ಜೋಯಿಸರಿಗೆ ರಾಜಾಶ್ರಯ ದೊರೆಯಿತು. ಆತನು ಹೇಳಿದ ಭವಿಷ್ಯ ಸುಳ್ಳಾಗುತ್ತಿರಲಿಲ್ಲ.

ಕ್ರಮೇಣ ಜೋಯಿಸರು ಅಧಿಕಾರಿಗಳ ಅನುಗ್ರಹಪಡೆದು ಯಥೇಚ್ಛವಾಗಿ ಹಣವನ್ನು ಸಂಪಾದಿಸಿ, ನದಿತೀರದಲ್ಲಿದ್ದ ಸ್ವಗ್ರಾಮದಲ್ಲಿ ನೂರಾರು ಎಕರೆ ಭೂಮಿಯನ್ನು ಕೊಂಡು ಪುಟ್ಟಜಮೀನುದಾರರಾದರು. ಫಸಲು ಬರುವ ಕಾಲದಲ್ಲಿ ಜೋಯಿಸರು ಸ್ವಗ್ರಾಮಕ್ಕೆ ಹೋಗಿ ಪೈರು ಕೊಯ್ಯಿಸಿ, ಮೆದೆ ಹಾಕಿಸಿ, ಕಣಮಾಡಿಸಿ, ದವಸವನ್ನು ಕಣಜದಲ್ಲಿ ತುಂಬಿಸಿ, ಅದರ ಮಾರಾಟದ ವ್ಯವಸ್ಥೆ ಮಾಡಿ ಮತ್ತೆ ರಾಜಧಾನಿಗೆ ಹಿಂತಿರುಗುವರು.

ಒಂದು ವರ್ಷ ಜೋಯಿಸರು ಇದೇಪ್ರಕಾರ ಸ್ವಗ್ರಾಮಕ್ಕೆ ಹೋದರು. ಪೈರು ಕೊಯ್ಯಿಸಿ ಧಾನ್ಯವನ್ನು ಹೊಲದಲ್ಲೇ ರಾಶಿ ಹಾಕಿದ್ದರು. ಮಧ್ಯಾಹ್ನ ಊಟವಾದ ನಂತರ ಒಂದು ನಿದ್ದೆ ಹೊಡೆದು, ಜೋಯಿಸರು ತಂಗಾಳಿಗೆ ಮೈಯೊಡ್ಡಿ ಪಡಸಾಲೆಯಲ್ಲಿ ಕುಳಿತಿದ್ದರು.

ಆ ವೇಳೆಗೆ ಆ ಗ್ರಾಮದ ಅಗಸ ಮಡಿಮಾಡಿದ ಬಟ್ಟೆಗಳನ್ನು ಕತ್ತೆಯಮೇಲೆ ಹೊರಿಸಿಕೊಂಡು ಬಂದ. ಜೋಯಿಸರು ಮನೆ ಮುಂದೆ ಪಡಸಾಲೆಯಲ್ಲಿ ಕುಳಿತಿರುವುದನ್ನು ಕಂಡು, "ಸೋಮಿಯೋರಾ, ಧಾನ್ಯವೆಲ್ಲಾ ಹೊಲದಲ್ಲಿರುವಂತಿದೆ. ಅದನ್ನು ಇನ್ನೂ ಕಣಜಕ್ಕೆ ಸೇರಿಸದೆ ಸುಮ್ಮನಿದ್ದೀರಲ್ಲಾ ಏಕೆ?" ಎಂದ.

"ಸೇರಿಸುವ, ಈಗೇನು ಅವಸರ" ಎಂದರು ಜೋಯಿಸರು ಬಹಳ ಅಲಕ್ಷ್ಯವಾಗಿ.

ಸಿ. ಸರಸ್ವತಿ

"ಅವಸರ? ಹಾಗೆಂದರೇನು ಸ್ವಾಮಿ. ಇನ್ನೊಂದು ಗಂಟೆಯೊಳಗೆ ಬಿರುಗಾಳಿ ಇತ್ತ ಬೀಸುವಂತಿದೆ." ಎಂದ ಅಗಸ.

ಜೋಯಿಸರು ನಕ್ಕು, "ನಿನ್ನ ಭವಿಷ್ಯ ಹಾಳಾಯಿತು. ಕಾರ್ತಿಕ ಮಾಸದಲ್ಲಿ ಮಳೆ ಬರುವುದೆಂದರೇನೊ. ಬಿರುಗಾಳಿ ಬೀಸುವುದೆಂದರೇನು? ಆಕಾಶ ನೋಡು, ಎಷ್ಟು ಪರಿಶುಭ್ರವಾಗಿದೆ. ಒಂದು ಮೋಡವಾದರೂ ಕಾಣಿಸುತ್ತಿಲ್ಲ! ತಂಗಾಳಿ ಬೀಸುತ್ತಿದೆ. ಹೀಗೆ ಅಸಂಬದ್ಧವಾಗಿ ಹಿರಿಯರೊಂದಿಗೆ ಮಾತನಾಡಬಾರದು" ಎಂದು ಮೂದಲಿಸಿದರು.

"ಏನೋ ನಿಮ್ಮ ಶುಭಕೋರಿ ಹೇಳಿದೆ. ತಿಥಿ ಮಾಸಗಳ ವಿಷಯ ನನಗೆ ತಿಳಿಯದು. ಇನ್ನೊಂದೆರಡು ಗಂಟೆಗಳಲ್ಲಿ ಬಿರುಗಾಳಿ ಬೀಸುತ್ತಿದೆ. ಕೂಡಲೇ ಹೊಲಕ್ಕೆ ಗಾಡಿಗಳನ್ನು ಕಳುಹಿಸಿ, ಒಂದು ಕಾಳೂ ಬಿಡದಂತೆ ಮನೆಗೆ ತರಿಸಿಕೊಳ್ಳಿ. ಇಲ್ಲವಾದರೆ ಚಿನ್ನದಂತಹ ಫಸಲು ವೃಥಾ ಹಾಳಾಗುತ್ತದೆ" ಎಂದು ಹೇಳಿ ಅಗಸನು ತನ್ನ ಮನೆಯಕಡೆ ನಡೆದನು.

ಜೋಯಿಸರು ಅವನ ಮೂಢತೆಗೆ ನಕ್ಕು, ಆಕಾಶದಕಡೆ ನೋಡಿದರು. ಪೂರ್ವದಿಕ್ಕಿನಲ್ಲಿ ಸಣ್ಣದೊಂದು ಮೋಡ ಕಾಣಿಸಿತು. ಮತ್ತೆ ಕೊಂಚಹೊತ್ತಿಗೆಲ್ಲಾ ಕಾಡಾನೆಗಳ ಮಂದೆಯಂತೆ ಕಾರ್ಮೋಡಗಳು ಕವಿದುಕೊಂಡವು. ಸೂರ್ಯನು ಕಣ್ಣಿಗೆ ಕಾಣಿಸದಾದನು. ಎಲ್ಲೆಲ್ಲೂ ಕತ್ತಲೆ ಕವಿಯಿತು. ಭಾರಿ ಭಾರಿ ವೃಕ್ಷಗಳನ್ನು ಬುಡಸಹಿತ ಉರುಳಿಸುವ ಬಿರುಗಾಳಿ ಬೀಸಲಾರಂಭಿಸಿತು. ಆಕಾಶದಲ್ಲಿ ಗುಡುಗು ಮಿಂಚು



ಗಳ ಹಾವಳಿ ಅಧಿಕವಾಗಿ ಧಾರಾಕಾರವಾಗಿ ಮಳೆ ಸುರಿಯಲಾರಂಭಿಸಿತು.

ಜೋಯಿಸರಿಗೆ ಏನು ಮಾಡಬೇಕೋ ತಿಳಿಯ ದಾಯಿತು. ಅಗಸನು ಹೇಳಿದಾಗಲೇ ಜಾಗ್ರತೆ ವಹಿಸಿ, ಧಾನ್ಯ ಮತ್ತು ದವಸಗಳನ್ನು ಮನೆಗೆ ಸೇರಿಸಿದ್ದರೆ ಈ ಪರಿ ನಷ್ಟವಾಗುತ್ತಿರಲಿಲ್ಲ. ಆದರೆ ಪಂಚಾಂಗದ ಪ್ರಕಾರ ಈ ಸಮಯದಲ್ಲಿ ಮಳೆ ಯಾಗುವ ಸೂಚನೆ ಇರಲಿಲ್ಲವಾದುದರಿಂದ ಜೋಯಿಸರು ಅಗಸನ ಮಾತಿಗೆ ಏನೂ ಲಕ್ಷ್ಯ ಕೊಟ್ಟಿರಲಿಲ್ಲ.

"ಈ ರೀತಿ ಬಿರುಗಾಳಿ ಬೀಸುವುದೆಂದು ಅಗ ಸನಿಗೆ ಒಂದು ಗಂಟೆ ಮುಂಚಿತವಾಗಿ ಹೇಗೆ ತಿಳಿಯಿತು?" ಎಂದು ಒಂದೇಸವನೆ ಆಲೋ ಚಿಸ ಹತ್ತಿದರು. ಬಿರುಗಾಳಿ ಸ್ವಲ್ಪ ಕಡಿಮೆ ಯಾದ ನಂತರ ಅವರು ಅಗಸನ ಮನೆಗೆ ಹೋಗಿ, "ಲೋ ವೆಂಕ, ನೀನು ಹೇಳಿದ ಪ್ರಕಾರವೇ ಮಳೆ ಬಂತೇ! ನಿನಗೆ ಭವಿಷ್ಯ ತಿಳಿದಿರಬೇಕು. ಯಾರ ಹತ್ತಿರ ಕಲಿತು ಕೊಂಡೆಯೋ ವೆಂಕಾ?" ಎಂದು ಪ್ರಶ್ನಿಸಿದರು.

"ಯಾರತಾವ ಎಲ್ಲಿ ಬಂತು ಸ್ವಾಮಿ. ನನ್ನ ಕತ್ತೆ ಮುಂದಾಗುವುದನ್ನು ತಿಳಿಸುತ್ತದೆ. ಅದರ ಮುಂದೆ ನಿಮ್ಮ ಪಂಚಾಂಗಗಳು ಕೆಲಸಕ್ಕೆ ಬಾರವು. ಇನ್ನೊಂದು ಮೂರು ನಾಲ್ಕು ಗಂಟೆ ಗಳಲ್ಲಿ ಮಳೆ ಬರುವ ಸೂಚನೆಯಿರುವಾಗ ಅದರ ಮೈಮೇಲಿನ ಕೂದಲು ನಿಮಿರುತ್ತದೆ. ಅದು ತನ್ನ ಕಿವಿ, ಕಣ್ಣುಗಳನ್ನು ಮೇಲೆತ್ತಿ ನಮ್ಮ ಕಿವಿಗೆ ಕೇಳಿಸದ ಮಳೆಗಾಗಿ ಆಲಿಸುವುದು. ನಂತರ ಬಾಲ ಮುದುಡಿಕೊಂಡು ಅತ್ತಿತ್ತ ನೆಗೆ ದಾಡುವುದು. ಆದರ ಭವಿಷ್ಯವಾಣಿ ಎಂದಿಗೂ ಸುಳ್ಳಾಗುವುದಿಲ್ಲ." ಎಂದ.

ಜೋಯಿಸರು ಮನೆಗೆ ಹೋಗುವ ಮುಂಚೆ "ಲೋ ವೆಂಕಾ ನಿನಗೆ ಪುಣ್ಯ ಬರುತ್ತದೆ, ಇಂದು ನಡೆದ ವಿಷಯ ಯಾರೊಂದಿಗೂ ಹೇಳಬೇಡ. ನನ್ನ ಮರ್ಯಾದೆ ಉಳಿಯುವುದಿಲ್ಲ" ಎಂದು ಅಗಸನನ್ನು ಅಂಗಲಾಚಿದರು.

ಆದರೆ ಈ ವಿಷಯ ಎಲ್ಲರಿಗೂ ತಿಳಿದು ಹೋಯಿತು. ಜೋಯಿಸರ ಹತ್ತಿರ ಭವಿಷ್ಯ ತಿಳಿಯಲು ಬರುವವರ ಸಂಖ್ಯೆ ಕ್ರಮೇಣ ಕಡಿಮೆಯಾಯಿತು. ಆದುದರಿಂದ ಅವರ ಐಶ್ವರ್ಯವು ಹೆಚ್ಚಾಗದೆ ನಿಂತಿತು.






8

[ಭುವನಸುಂದರಿಯ ಕಾರಣದಿಂದಾಗಿ ಗ್ರೀಕರ ಕಡೆ ಅನೇಕರು ಮರಣ ಹೊಂದಿದರು. ಅವರಲ್ಲಿ ಮಹಾಯೋಧರಾದ ವಜ್ರಕಾಯ, ಭೂಧವ ಮೊದಲಾದವರಿದ್ದರು; ಟ್ರೋಜನ್ ಪ್ರಮುಖರಲ್ಲಿಕೂಡಾ ವೀರಸಿಂಹ, ಮೋಹನ ಮುಂತಾದುವರು ಸತ್ತಿದ್ದರು. ಮೋಹನನು ತೀರಿಕೊಂಡ ಕೂಡಲೇ ಭುವನಸುಂದರಿಯನ್ನು, ಆಕೆಯ ಒಪ್ಪಿಗೆಯಿಲ್ಲದೆಯೇ ಅರಿಭಯಂಕರನು ಮದುವೆಯಾದನು. ಟ್ರಾಯ್ ನಗರದ ಪತನಕ್ಕೆ ಕಂಕಣತೊಟ್ಟ ರೂಪಧರನಿಗೆ ಭುವನಸುಂದರಿ ಮತ್ತು ಆಕೆಯ ಅತ್ತೆ ಸಹಕರಿಸಿದರು. ತರುವಾಯ—]

ಟ್ರಾಯ್ ನಗರದ ಪತನಕ್ಕೆ ಸ್ವಲ್ಪ ಮೊದಲು ವರ್ಧನನ ಮಕ್ಕಳಲ್ಲಿ ಅಂತಃ ಕಲಹಗಳುಂಟಾಗಿ ಬಹಳ ವಿಕೋಪಕ್ಕಿಟ್ಟುಕೊಂಡಿತು.

ಅದನ್ನು ಕಂಡು ವರ್ಧನನು ಗ್ರೀಕರೊಂದಿಗೆ ಸಂಧಿ ಮಾಡಿಕೊಳ್ಳಲು ರಹಸ್ಯವಾಗಿ ಪ್ರಯತ್ನ ನಡೆಸಿದನು. ಆತನ ಭಾವಮೈದುನನಾದ ಪ್ರತ್ಯಮ್ನನೆಂಬುವನನ್ನು ರಾರಾಜನ ಬಳಿಗೆ ಕಳುಹಿಸಿದನು.

ಪ್ರತ್ಯಮ್ನನಿಗೆ ಅರಿಭಯಂಕರನನ್ನು ಕಂಡರೆ ಆಗುತ್ತಿರಲಿಲ್ಲ. ಆದುದರಿಂದ ಅವನು ಸಂಧಾನ ನಡೆಸಿ ಹಿಂತಿರುಗುವ ಬದಲಾಗಿ ರೂಪಧರನೊಂದಿಗೆ ಒಂದು ರಹಸ್ಯ ಒಪ್ಪಂದ ಮಾಡಿಕೊಂಡನು. ಟ್ರಾಯ್ ಸಿಂಹಾಸನ ಮತ್ತು ಕೋಶಾಗಾರದಲ್ಲಿರುವ ಸಂಪತ್ತಿನ ಅರ್ಧಭಾಗ ಪ್ರತ್ಯಮ್ನನಿಗೆ ಸೇರಬೇಕು. ಪ್ರತ್ಯಮ್ನನು ಟ್ರಾಯ್ ನಗರವನ್ನು ರೂಪಧರನವಶಕ್ಕೊಪ್ಪಿಸಬೇಕು—

ಒಂದು ಗ್ರೀಕ್ ಪುರಾಣಕಥೆಯ ಆಧಾರದಿಂದ



ಎಂಬುದಾಗಿ ಒಪ್ಪಂದ ಮಾಡಿಕೊಂಡರು. ಈ ಒಳಸಂಚನ್ನು ಕಾರ್ಯರೂಪಕ್ಕೆ ತರುವ ಕೆಲಸದಲ್ಲಿ ಪ್ರಶಂಸನೂ ಸಹ ಸಹಾಯ ಮಾಡುವನೆಂದು ಪ್ರತ್ಯಮ್ನನು ರೂಪಧರನೊಂದಿಗೆ ಹೇಳಿದನು.

ಟ್ರಾಯ್‌ನಗರದಲ್ಲಿ ಗ್ರೀಕರಿಗೆ ಸಹಾಯ ಮಾಡುವವರು ಅನೇಕರಿದ್ದರು. ಆ ನಗರದಿಂದ ಬುದ್ಧಿಮತಿಯ ವಿಗ್ರಹ ಕಳುವಾಗಿತ್ತು. ಟ್ರಾಯ್ ನಗರದ ಪತನಕ್ಕೆ ಅನುಕೂಲವಾದ ಸ್ಥಿತಿ ಏರ್ಪಟ್ಟಿತ್ತು. ಗ್ರೀಕರು ನಗರದೊಳಕ್ಕೆ ಪ್ರವೇಶಿಸುವದೊಂದೇ ಬಾಕಿ. ಗ್ರೀಕರು ಅದಕ್ಕೊಂದು ಉಪಾಯ ಹೂಡಿದರು. ಅದರ ಸಲುವಾಗಿ ಅವರು ಒಂದು ಭಾರಿ ಮರದ ಕುದುರೆಯನ್ನು ತಯಾರುಮಾಡಲು ಸಿದ್ಧರಾದರು.



ಈ ಕುದುರೆಯನ್ನು ಮಾಡಿದವನು ದೋರ್ಧಂಡ. ಈತನು ಗ್ರೀಕರಪರವಾಗಿ ಹೋರಾಡಲು ಮೂವತ್ತು ನೌಕೆಗಳೊಂದಿಗೆ ಬಂದಿದ್ದನು. ಈತನು ಹೆಸರಾಂತ ಶಿಲ್ಪಿ; ಮಲ್ಲಯುದ್ಧದಲ್ಲಿ ಘಟಿಕ. ಆದರೆ ಬಹಳ ಅಂಜುಕುಳಿ. ಈತನು ಮರದ ಕುದುರೆಯನ್ನು ಸಿದ್ಧಪಡಿಸಿ ಅದಕ್ಕೆ ಒಂದು ಕಡೆ ಯಾರಿಗೂ ತಿಳಿಯದಂತೆ, ಬಾಗಿಲೊಂದನ್ನು ಅಣಿಮಾಡಿದನು. ಮತ್ತೊಂದು ಕಡೆ 'ನಮ್ಮ ಸ್ವದೇಶ ಪ್ರಯಾಣ ಸುಖವಾಗಿ ಸಾಗುವಂತೆ ಆಶೀರ್ವದಿಸಿ ನಮ್ಮನ್ನು ಕಳುಹಿಸಿಕೊಟ್ಟಿರುವ ಬುದ್ಧಿಮತಿ ದೇವಿಗೆ ಗ್ರೀಕರ ಕಿರುಕಾಣಿಕೆ' ಎಂದು ಕೆತ್ತಿಸಿದನು. ಆ ಬ್ರಹ್ಮಾಂಡವಾದ ಕುದುರೆಯ ಹೊಟ್ಟೆಯಿಂದ ಹೊರಗೆ ಬರಲು ಒಂದು ನೂಲೇಣಿಯನ್ನು ಅದರಲ್ಲೇ ಒದಗಿಸಲಾಗಿತ್ತು.

ತರುವಾಯ ರೂಪಧರನು ಗ್ರೀಕವೀರರನ್ನು ಕುದುರೆಯ ಚದರದಲ್ಲಿ ಅಡಗಿ ಕುಳಿತುಕೊಳ್ಳುವಂತೆ ಬಲವಂತಪಡಿಸಿದನು. ಅವರಲ್ಲಿ ಪ್ರತಾಪ, ರೂಪಧರ, ದೇವಮಯ ಮುಂತಾದ ಮೂವತ್ತು ಜನ ವೀರರಿದ್ದರು. ಕದುರೆಯನ್ನು ನಿರ್ಮಿಸಿದ ದೋರ್ಧಂಡನನ್ನೂ ಹತ್ತಿಸಿಕೊಂಡರು. ಎಲ್ಲರೂ ನೂಲೇಣಿಯ ಮೂಲಕ ಹತ್ತಿದರು. ತರುವಾಯ ದೋರ್ಧಂಡನು ಒಳಗೆ ಬಂದು ನೂಲೇಣಿಯನ್ನು ಒಳಕ್ಕೆಳೆದುಕೊಂಡು ಭದ್ರವಾಗಿ ಬಾಗಿಲು ಮುಚ್ಚಿ ಅಗಳಿ ಹಾಕಿದನು.

ಉಳಿದ ಕಾರ್ಯಕ್ರಮವೆಲ್ಲಾ ರೂಪಧರನು ಮಾಡಿದ ವ್ಯವಸ್ಥೆಯ ಪ್ರಕಾರ ನಡೆಯಿತು.









ಅಂದು ಕತ್ತಲಾದ ಕೂಡಲೇ ಗ್ರೀಕರು ತಮ್ಮ ಶಿಬಿರಕ್ಕೆ ಕೊಳ್ಳಿ ಇಟ್ಟರು. ಕುದುರೆಯ ಜಠರದಲ್ಲಿ ಅಡಗಿದ್ದ ವೀರರ ಹೊರತಾಗಿ ಉಳಿದ ಗ್ರೀಕರೆಲ್ಲ ರಾರಾಜನೊಂದಿಗೆ ಹಡಗುಗಳನ್ನು ಹತ್ತಿ, ಲೆಸೆಡೋಸ ದ್ವೀಪಕ್ಕೆ ಸ್ವಲ್ಪ ದೂರದಲ್ಲಿದ್ದ ದ್ವೀಪಗಳ ಮಧ್ಯೆ ಲಂಗರು ಹಾಕಿದರು. ಆದರೆ ಒಬ್ಬ ಗ್ರೀಕನುಮಾತ್ರ ಮರದ ಅಶ್ವದೊಂದಿಗೆ ಟ್ರಾಯ್‌ನಗರದ ತೀರದಲ್ಲಿ ಮನಃಪೂರ್ವಕವಾಗಿ ಉಳಿದುಕೊಂಡನು. ಹಾಗೆ ಉಳಿದಿದ್ದಾತ ರೂಪ ಧರನ ದಾಯಾದಿ. ಆವನ ಹೆಸರು ಚೌರ್ಯ ನಾಥ. ಗ್ರೀಕ್ ನೌಕೆಗಳು ಮತ್ತೆ ಟ್ರಾಯ್ ನಗರಕ್ಕೆ ಹಿಂತಿರುಗಲು ಸುಸಮಯ ಬದಗಿದಾಗ ಕಕ್ಕಡವನ್ನು ಹಚ್ಚಿ ಸಂಕೇತ ಸೂಚಿಸುವ ಕಾರ್ಯ ಇವನ ಪಾಲಿಗೆ ಬಿದ್ದಿತ್ತು.

ಮಾರನೇಯ ದಿನ ಬೆಳಗಾಯಿತು. ಗ್ರೀಕ್ ಶಿಬಿರದ ಪರಿಸ್ಥಿತಿಯನ್ನು ನೋಡಲು ಬಂದ ಟ್ರೋಜನ ಬೇಹುಗಾರರು ನಗರಕ್ಕೆ ಹಿಂತಿರುಗಿ ಹೋಗಿ ಗ್ರೀಕ್ ಶಿಬಿರ ಭಸ್ಮವಾಗಿದೆಯೆಂದೂ, ಸಮುದ್ರತೀರದಲ್ಲಿ ಅನಾಥವಾದ ಒಂದು ಮರದ ಕುದುರೆ ಇರುವುದೆಂದೂ ಹೇಳಿದರು. ಈ ವಿಚಿತ್ರ ಸುದ್ದಿ ಕೇಳಿದ ವರ್ಧನನು ತನ್ನ ಮಕ್ಕಳು ಮತ್ತು ಅಧಿಕಾರವರ್ಗದೊಂದಿಗೆ ಕುದುರೆಯನ್ನು ಕಾಣಲು ಹೋದನು.

ಎಲ್ಲರೂ ಆ ಭಾರಿ ಕುದುರೆಯನ್ನು ಕಂಡು ವಿಸ್ಮಯಹೊಂದುತ್ತಾ ನಿಂತರು. ಆಗ ಒಬ್ಬನು ಅದರಲ್ಲಿ ಕೆತ್ತಿರುವ ಅಕ್ಷರಗಳನ್ನು ಓದಿ "ಗ್ರೀಕರು ಈ ಕುದುರೆಯನ್ನು ಬುದ್ಧಿಮತಿದೇವಿಗೆ ಕಾಣಿಕೆ ಯಾಗಿ ಕೊಟ್ಟಿರುವರು. ನಾವು ಇದನ್ನು ಯಾಕೆ ಆಲಯದ ಮುಂದೆ ನಿಲ್ಲಿಸಬಾರದು?" ಎಂದು ಪ್ರಶ್ನಿಸಿದನು.

ಮತ್ತೊಬ್ಬನು "ಈ ಯುದ್ಧದಲ್ಲಿ ಬುದ್ಧಿ ಮತಿದೇವಿ ನಮ್ಮ ಪಕ್ಷಕ್ಕಿಂತಲೂ ಶತ್ರುಪಕ್ಷದ ವರಿಗೇ ಬಹಳ ಸಹಾಯ ನೀಡಿರುವಳು. ನಾವೀಗಲೇ ಈ ಕುದುರೆಗೆ ಬೆಂಕಿ ಹಚ್ಚೋಣ. ಇಲ್ಲ ಇದನ್ನು ಚೂರು ಚೂರು ಮಾಡಿ, ಇದರ ಹೊಟ್ಟೆಯಲ್ಲಿ ಏನಿದೆಯೋ ನೋಡೋಣ" ಎಂದು ಸಲಹೆ ನೀಡಿದನು.

ಈ ಸಲಹೆಗೆ ವರ್ಧನನು ಸುತರಾಂ ಒಪ್ಪಿಗೆ ನೀಡಲಿಲ್ಲ. "ದೇವತೆಗೆ ಕಾಣಿಕೆಯಾಗಿ ಕೊಟ್ಟ ವಸ್ತುವನ್ನು ನಾಶಪಡಿಸುವುದು ಪಾಪಕರ. ನಾವು ಈ ಕುದುರೆಯನ್ನು ನಮ್ಮ ನಗರಕ್ಕೆ






CHITRA

ಸಾಗಿಸೋಣ" ಎಂದ. ಆದರಂತೆ ಟ್ರೋಜನರು ಆ ಕುದುರೆಗೆ ದೊಡ್ಡದೊಡ್ಡ ಚಕ್ರಗಳನ್ನು ಜೋಡಿಸಿ, ಕೋಟೆಯ ದ್ವಾರದಬಳಿಗೆ ತೆಗೆದು ಕೊಂಡು ಹೋದರು. ಆದರೆ ಆ ದೊಡ್ಡದ್ವಾರ ಆ ಭಾರಿ ಕುದುರೆಗೆ ತುಂಬಾ ಸಣ್ಣದಾಗಿತ್ತು. ಆಗ ಟ್ರೋಜನರು ಕೋಟೆಯ ಗೋಡೆಯನ್ನು ಒಂದು ಕಡೆ ಕೆಡವಿ ವಿಸ್ತಾರವಾದ ದಾರಿಮಾಡಿ, ಮರದ ಕುದುರೆಯನ್ನು ಎಳೆದುಕೊಂಡು ಬಂದು ನಗರದೊಳಕ್ಕೆ ಸೇರಿಸಿದರು.

ದಾರಿ ವಿಸ್ತಾರಪಡಿಸಿದರೂ ಸಹ ಗೋಡೆಗೆ ಆ ಕುದುರೆ ನಾಲ್ಕು ಬಾರಿ ತಾಕಿತು.

ಕುದುರೆ ಕೋಟೆಯನ್ನು ಪ್ರವೇಶಿಸಿದಕೂಡಲೇ ಕೆಡವಿದ್ದ ಗೋಡೆಯನ್ನು ಮತ್ತೆ ಯಥಾಪ್ರಕಾರ ಕಟ್ಟಿ, ಕುದುರೆಯನ್ನು ನಗರದ ನಡುವೆ ತಂದು ನಿಲ್ಲಿಸಿದರು. ಆ ಕುದುರೆಯನ್ನು ಕುರಿತು ಮತ್ತೆ ಟ್ರೋಜನರಲ್ಲಿ ಬಗೆಬಗೆಯಾಗಿ ಭಿನ್ನಾಭಿಪ್ರಾಯ ಗಳು ತಲೆದೋರಿದುವು.

ವರ್ಧನನ ಮಗಳು ಜಾಲಿನಿಗೆ ದಿವ್ಯದೃಷ್ಟಿ ಯಿತ್ತು. ಆಕೆ ಕುದುರೆಯನ್ನು ಕಂಡು, "ಇದ ರಲ್ಲಿ ಆಯುಧಪಾಣಿಗಳಾದ ವೀರರಿದ್ದಾರೆ" ಎಂದು ಕಿರಿಚಿದಳು.

ಪ್ರದ್ಯುಮ್ನನ ಮಗ ತೀಕ್ಷ್ಣದೃಷ್ಟಿ ಎಂಬು ವನು ಆಕೆಯ ಮಾತನ್ನು ಅನುಮೋದಿಸಿದ್ದು ಮಾತ್ರವಲ್ಲದೆ, "ಇವರು ಮೂಢ ಶಿಖಾಮಣಿ ಗಳು. ಇಲ್ಲದಿದ್ದರೆ ಗ್ರೀಕರು ಕೊಟ್ಟ ದಾನ ವನ್ನು ತೆಗೆದುಕೊಳ್ಳುವುದುಂಟೇ?" ಎಂದು ತನ್ನ ಶೂಲವನ್ನು ಕುದುರೆಯ ಮೇಲೆಸೆದನು.




ಅದು ಆ ಮರದ ಕುದುರೆಯ ಪಕ್ಕಕ್ಕೆ ಬಲವಾಗಿ ಚುಚ್ಚಿಕೊಂಡಿತು. ಆಗಲೇ ಕುದುರೆಯ ಹೊಟ್ಟೆ ಯಲ್ಲಿ ಆಯುಧಗಳು ಒಂದುಕೊಂದು ತಗುಲಿ ಖಣ್ ಎಂದು ಶಬ್ದವಾಯಿತು.

ಸುತ್ತಲೂ ಸೇರಿದ್ದ ಜನ "ಅದನ್ನು ಸುಟ್ಟು ಬಿಡಿ. ಕೋಟೆ ಗೋಡೆಯ ಮೇಲಿಂದ ಹೊರಗೆ ಸೆಯಿರಿ" ಎಂದು ಅರಚಿದರು. ವರ್ಧನನ ಪಕ್ಷ ದವರು ಆ ಮರದ ಅಶ್ವಕ್ಕೆ ಏನೂ ಅಪಾಯ ಮಾಡಬಾರದೆಂದು ಅವರನ್ನು ಪ್ರಾರ್ಥಿಸಿದರು.

ಈ ರೀತಿ ತರ್ಜನೆ ಭರ್ಜನೆಗಳಾಗುತ್ತಿರಲು ಟ್ರೋಜನ್ ಸೈನಿಕರಿಬ್ಬರು ಒಬ್ಬ ಗ್ರೀಕನನ್ನು ಬಂಧಿಸಿ, ಕೈಗೆ ಕೋಳ ತೊಡಿಸಿ, ಅಲ್ಲಿಗೆ ಎಳೆದು ಕೊಂಡು ತಂದರು. ಇವನು ಚೌರ್ಯನಾಥ. ಚೌರ್ಯನಾಥನನ್ನು ಟ್ರೋಜನರು ನಾನಾವಿಧ

ವಾಗಿ ಪ್ರಶ್ನಿಸಿದರು. ಆದರೆ ರೂಪಧರನ ಕೈಕೆಳಗೆ ನುರಿತಿದ್ದ ಚೌರ್ಯನಾಥನು ಟ್ರೋಜನರಿಗೆ ನಂಬಿಕೆ ಹುಟ್ಟುವಂತೆ ಒಂದು ಕತೆ ಕಟ್ಟಿ ಈ ರೀತಿ ಹೇಳಿದನು.

"ಪ್ರಭೋಧನ ಹತ್ಯಾ ರಹಸ್ಯ ನನಗೆ ಗೊತ್ತು. ಈ ರಹಸ್ಯ ನಾನರಿತಿರುವುದು ರೂಪಧರನಿಗೆ ಕೆಡಕೆನಿಸಿತು. ಗ್ರೀಕರಿಗೆ ಯುದ್ಧವೆಂದರೆ ತುಂಬಾ ಬೇಸರವಾಗಿಬಿಟ್ಟಿದೆ. ಅನುಕೂಲವಾಗಿ ಗಾಳಿ ಬೀಸಿದ್ದರೆ ಅವರು ಎಂದೋ ತಮ್ಮ ದೇಶಕ್ಕೆ ಹೊರಟುಬಿಡುತ್ತಿದ್ದರು. ಟ್ರಾಯ್‌ನಗರ ಮುತ್ತಲು ಬಂದಾಗಲೂ ಸಹ ಗಾಳಿ ಅವರಿಗೆ ಪ್ರತಿಕೂಲವಾಗಿತ್ತು. ಆಗ ಗ್ರೀಕರು ದೇವತೆಗಳಿಗೆ ಬಲಿಕೊಟ್ಟು ವಾಯು ದೇವನನ್ನು ಸಂಪ್ರೀತಿಗೊಳಿಸಿದರು. ಈ ಸಾರಿ ರೂಪಧರನು ಕೌಂಶಿಕನನ್ನು ಕುರಿತು 'ಯಾರನ್ನು ಬಲಿಕೊಟ್ಟರೆ ನಮಗೆ ಅನುಕೂಲವಾಗಿ ಗಾಳಿ ಬೀಸುವುದು?" ಎಂದು ಕೇಳಿದನು. ಕೌಂಶಿಕನು ತನಗೆ ಹತ್ತು ದಿನ ಅವಧಿ ಕೊಟ್ಟಲ್ಲಿ ಉತ್ತರ ಕೊಡುವುದಾಗಿ ಹೇಳಿದನು. ಇಷ್ಟರಲ್ಲಿ ರೂಪಧರನು ಅವನಿಗೆ ಲಂಚ ತಿನ್ನಿಸಿರಬೇಕೆಂದು ನಾನು ಭಾವಿಸುವೆನು. ಹತ್ತು ದಿನಗಳನಂತರ ಕೌಂಶಿಕನು ನನ್ನ ಕಡೆ ಬೆರಳುಮಾಡಿ ತೋರಿಸಿದ. ಕೂಡಲೇ ನನ್ನ ಕೈಗೆ ಬೇಡಿ ತೊಡಿಸಿದರು. ನನ್ನನ್ನು ಬಲಿ ಕೊಡುವಷ್ಟರಲ್ಲಿ ಅದೃಷ್ಟವಶಾತ್ ಅನುಕೂಲವಾಗಿ ಗಾಳಿ ಬೀಸಿತು. ಕೂಡಲೇ ಎಲ್ಲರ ಲಕ್ಷ್ಯ ಆಕಡೆ ಹೋಯಿತು. ನನ್ನ ವಿಷಯವನ್ನು ಮರೆತು ಅವರೆಲ್ಲ ಸ್ವದೇಶಕ್ಕೆ ಹಿಂತಿರುಗುವ ಸಿದ್ಧತೆಯಲ್ಲಿ ತೊಡಗಿದರು. ಆ



ಅಡಾವುಡಿಯಲ್ಲಿ ನಾನು ಅವರ ಕೈಯಿಂದ ತಪ್ಪಿಸಿಕೊಂಡು ಈಕಡೆಗೆ ಓಡಿಬಂದೆ."

ವರ್ಧನನು ಚೌರ್ಯನಾಥನು ಹೇಳಿದ ಪ್ರತಿ ಮಾತನ್ನೂ ನಂಬಿದನು. "ಮತ್ತೆ ಈ ಅಶ್ವದ ವಿಷಯವೇನು?" ಎಂದು ಕೇಳಲು, ಚೌರ್ಯನಾಥನು ಹೀಗೆ ನುಡಿದನು:

"ಬುದ್ಧಿಮತಿ ನಮ್ಮವರಿಗೆ ಅನುಕೂಲವಾಗಿದ್ದಳೆಂಬ ಮಾತು ಸತ್ಯ. ಆದರೆ ಈ ರೂಪಧರ ದೇವಮಯರು ಸೇರಿಕೊಂಡು ನಿಮ್ಮ ನಗರದಿಂದ ಆ ವಿಗ್ರಹವನ್ನು ತಂದ ನಂತರ ಆಕೆ ನಮ್ಮಮೇಲೆ ಆಗ್ರಹಗೊಂಡಳು. ವಿಗ್ರಹವನ್ನು ನಮ್ಮ ಶಿಬಿರಕ್ಕೆ ಸೇರಿಸಿದ ಕೂಡಲೇ ಮೂರು ಸಾರಿ ವಿಗ್ರಹದಿಂದ ಮಹಾಜ್ವಾಲೆಗಳು ಹೊರಟವು. ವಿಗ್ರಹದ ಪಾದಗಳು ಬೆವರಿನಿಂದ ಒದ್ದೆಯಾದುವು. ದೇವಿ ಕೋಪಗೊಂಡಿರುವಳೆಂದು ಗ್ರಹಿಸಿದೆವು. ಇಲ್ಲಿಗೇ ಯುದ್ಧವನ್ನು ಮುಕ್ತಾಯಗೊಳಿಸಿ ಸ್ವಸ್ಥಾನಕ್ಕೆ ಹಿಂತಿರುಗುವುದು ಶ್ರೇಷ್ಠವೆಂದೂ, ಬುದ್ಧಿಮತಿದೇವಿಗೆ ಕಾಣಿಕೆಯನ್ನು ಸಲ್ಲಿಸಿ ಕೂಡಲೇ ಹೊರಟು ಬಿಡಬೇಕೆಂದೂ ನಿರ್ಧರಿಸಲಾಯಿತು. ಸುಮುಹೂರ್ತ ನೋಡಿ ಮತ್ತೆ ನಿಮ್ಮ ನಗರದಮೇಲೆ ದಂಡೆತ್ತಿ ಬರುವುದು ಉಚಿತವೆಂದು ಕೌಂಶಿಕನು ರಾರಾಜನಿಗೆ ಸಲಹೆ ಕೊಟ್ಟನು."

"ಈ ಭಾರಿ ಪ್ರಮಾಣದ ಅಶ್ವವನ್ನು ಏತಕ್ಕಾಗಿ ಸಿದ್ಧಪಡಿಸಿದರು?" ಎಂದು ವಿಸ್ಮಯದಿಂದ ಕೇಳಿದ ವರ್ಧನ.

"ನೀವು ಇದನ್ನು ನಗರಕ್ಕೆ ತೆಗೆದುಕೊಂಡು ಹೋಗಬಾರದೆಂದು ಗ್ರೀಕರ ಉದ್ದೇಶವಿತ್ತು. ಈ



ಕುದುರೆಯನ್ನು ನೀವು ಉಪೇಕ್ಷಿಸಿ ಬಿಟ್ಟುಬಿಟ್ಟದ್ದೇ ಆದರೆ ದೇವಿ ನಿಮ್ಮಮೇಲೆ ಆಗ್ರಹಗೊಳ್ಳುವಳು. ನೀವು ಒಂದುವೇಳೆ ನಿಮ್ಮ ನಗರಕ್ಕೆ ಸಾಗಿಸಿಕೊಂಡು ಹೋದರೆ ನಿಮಗೆ ಯುದ್ಧದಲ್ಲಿ ಅಪಜಯ ವಾಗುವುದಿಲ್ಲ. ನಿಮ್ಮ ಸಾಮ್ರಾಜ್ಯ ನಾಲ್ಕು ದಿಶೆಗೂ ಹಬ್ಬುವುದು. ಈ ಸಂಕೇತಗಳನ್ನು ತಿಳಿಯಬೇಕೆಂತಲೇ ಅವರು ಈ ಭಾರಿ ಪ್ರಮಾಣದ ಕುದುರೆಯನ್ನು ತಯಾರು ಮಾಡಿದರು." ಎಂದ ಚೌರ್ಯನಾಥ.

"ಎಲ್ಲಾ ಶುದ್ಧ ಸುಳ್ಳು. ಇವೆಲ್ಲಾ ರೂಪಧರನ ಕಲ್ಪನೆಗಳು. ವರ್ಧನ, ನೀನು ಈ ಮಾತುಗಳನ್ನು ನಂಬಬೇಡ." ಎಂದು ಹೇಳಿದ ತೀಕ್ಷ್ಣದೃಷ್ಟಿ. ಆತನು ಮತ್ತೂ ತನ್ನ ಮಾತನ್ನು ಮುಂದುವರೆಸಿ, "ನಾನೀಗಲೇ ಹೋಗಿ ನನ್ನ ಇಷ್ಟ ದೇವತೆಗೆ ಇದನ್ನು ಬಲಿ ನೀಡಿ, ಆರಾಧನೆ ಮಾಡಿ, ಈ ಮರದ ಕುದುರೆಯನ್ನು ಭಸ್ಮ ಮಾಡುವ ಮಾರ್ಗ ಹುಡುಕುವೆನು" ಎಂದನು.

ಆದರೆ ತೀಕ್ಷ್ಣದೃಷ್ಟಿ ಈ ಕಾರ್ಯವನ್ನು ಮಾಡಲಾಗಲಿಲ್ಲ; ಟ್ರಾಯ್‌ನಗರವನ್ನು ರಕ್ಷಿಸಲೂ ಆಗಲಿಲ್ಲ. ಏಕೆಂದರೆ ಮನೆಗೆ ಬಂದ ಕೂಡಲೇ ಎಲ್ಲಿಂದಲೋ ಎರಡು ಸರ್ಪಗಳು ಬಂದು ಆತನ ಇಬ್ಬರು ಮಕ್ಕಳನ್ನು ಸಾಯಿಸಿದುವು. ತನ್ನ ಮಕ್ಕಳನ್ನು ಕಾಪಾಡಲು ಹೋಗಿ ತೀಕ್ಷ್ಣದೃಷ್ಟಿಯೂ ಸಹ ಮರಣಿಸಿದನು.

ಈ ದುರಂತವನ್ನು ಕಂಡು ಟ್ರೋಜನರು ಚೌರ್ಯನಾಥನು ಹೇಳಿದ ಕಟ್ಟುಕತೆಯನ್ನು ಗಟ್ಟಿಯಾಗಿ ನಂಬಿಬಿಟ್ಟರು. ಮರದ ಕುದುರೆಗೆ ಭರ್ಜಿಗೆಯನ್ನು ಎಸೆದ ಪಾಪಕ್ಕೆ ತೀಕ್ಷ್ಣದೃಷ್ಟಿಗೆ ಈ ದುರ್ಗತಿಯುಂಟಾಯಿತೆಂದು ವರ್ಧನನು ಭಾವಿಸಿದನು. ಅವನು ಆ ಅಶ್ವವನ್ನು ಶಾಸ್ತ್ರೋಕ್ತವಾಗಿ ಬುದ್ಧಿಮತಿದೇವಿಗೆ ಅರ್ಪಣೆ ಮಾಡಿಸಿದನು. ಟ್ರೋಜನ್ ಸ್ತ್ರೀಯರು ನದೀತೀರಕ್ಕೆ ಹೋಗಿ ಪುಷ್ಪಗಳನ್ನು ಕಿತ್ತು ತಂದು, ಹಾರ ಕಟ್ಟಿ, ಅಶ್ವದ ಕೊರಳಿಗೆ ಹಾಕಿದರು. ಅದರ ನಾಲ್ಕು ಕಾಲುಗಳ ಹತ್ತಿರ ಪುಷ್ಪಗಳನ್ನು ಚೆಲ್ಲಿದರು.

ಟ್ರೋಜನರು ತಮಗೆ ಯುದ್ಧದಲ್ಲಿ ಜಯ ಲಭಿಸಿತೆಂದು ಭಾವಿಸಿ ಅನೇಕ ಉತ್ಸವಗಳನ್ನು ಏರ್ಪಡಿಸಿದರು. ಪ್ರಶಂಸನು ಮಾತ್ರ ತನ್ನ ಬಲದೊಂದಿಗೆ ಐಡಾ ಪರ್ವತಕ್ಕೆ ಹೊರಟು ಹೋದನು. (ಇನ್ನು ಇದೆ)



# ವ್ಯತ್ಯಾಸವೆಲ್ಲಿ?

ಕಾಶೀನಗರದಲ್ಲಿ ಒಬ್ಬ ವರ್ತಕನಿಗೆ ನಾಲ್ಕುಮಂದಿ ಮಕ್ಕಳಿದ್ದರು. ಅವರು ಒಂದುದಿನ ತಿರುಗಾಡಲು ಹೋಗುತಿದ್ದಾಗ ಒಬ್ಬ ಬೇಟೆಗಾರ ಬಂಡಿಯಲ್ಲಿ ಬೇಟೆಯ ಮಾಂಸ ವನ್ನಿಟ್ಟುಕೊಂಡು ಇದಿರು ಬರುತ್ತಾ ಇದ್ದ.

"ಲೋ! ನನಗೆ ಸ್ವಲ್ಪ ಮಾಂಸ ಕೊಡೊ" ಎಂದು ಹಿರಿಯವನು ಬೇಟೆಗಾರ ನನ್ನು ಅಧಿಕಾರದಿಂದ ಕೇಳಿದ. ಬೇಟೆಗಾರನು ಪ್ರಾಣಿಯಚರ್ಮ ಸ್ವಲ್ಪ ಕೊಯಿದುಕೊಟ್ಟ.

ಎರಡನೆಯವನು—"ತಮ್ಮಾ, ನನಗೂ ಸ್ವಲ್ಪ ಮಾಂಸ ಕೊಡು" ಎಂದ. ಕೂಡಲೇ ಬೇಟೆಗಾರ ತೊಡೆಯ ಮಾಂಸವಿಷ್ಟು ಕೊಯಿದು ಕೊಟ್ಟ.

ಮೂರನೇಯವ—"ಅಪ್ಪಾ, ನಮಗೂ ಸ್ವಲ್ಪ ಮಾಂಸ ಕೊಡಪ್ಪ" ಎಂದ. ಬೇಟೆ ಗಾರ ಗುಂಡಿಗೆಯೊಂದನ್ನು ಎತ್ತಿ ಕೊಟ್ಟ.

ನಾಲ್ಕನೇಯವ—"ಗೆಳೆಯನೇ, ನನಗೂ ಮಾಂಸ ಕೊಡಲಾರೆಯಾ? ಎಂದು ಕೇಳಿದ. ಕೂಡಲೆ ಬೇಟೆಗಾರ—"ಸ್ನೇಹಿತನೇ, ನಿನ್ನ ಮನೆ ಎಲ್ಲಿಹೇಳು. ಈ ಬಂಡಿ ಯಲ್ಲಿರುವ ಮಾಂಸವೆಲ್ಲಾ ನಿನ್ನ ಮನೆಗೆ ಸೇರಿಸುತ್ತೇನೆ. ಇದೆಲ್ಲಾ ನಿನಗೇ" ಎಂದ.

"ನಾವು ನಾಲ್ವರು ಸಹೋದರರಲ್ಲಿ ಈ ವ್ಯತ್ಯಾಸ ತೋರಿಸಿದಿಯೇಕೆ?" ಎಂದು ಹಿರಿಯ ಸೋದರ ಕೇಳಿದ.

"ವ್ಯತ್ಯಾಸವು ನೀವು ಕೇಳಿದ ರೀತಿಯಲ್ಲಿತ್ತು. ನನ್ನಲ್ಲಿ ಅಲ್ಲ" ಎಂದ ಬೇಟೆಗಾರ.

ಅವರು ಸಂತೋಷದಿಂದ ಅವನನ್ನು ಕರೆದೊಯ್ದು ತಮ್ಮ ಬಳಿಯಲ್ಲಿ ನೌಕರ ನನ್ನಾಗಿ ಮಾಡಿಕೊಂಡರು.



# ನಾವಿಕ ಸಿಂದಬಾದ್

ಕೊಂಚಕಾಲ ಯಾವ ಚಿಂತೆಯೂ ಇಲ್ಲದೆ ಸುಖವಾಗಿ ಕಳೆಯಿತು. ಒಂದು ದಿನ ಸಾಯಂಕಾಲ ತಂಗಾಳಿಯಲ್ಲಿ ಮನೆಯಮುಂದೆ ಕುಳಿತುಕೊಂಡಿರಲು ಬೀದಿಯಲ್ಲಿ ಕೆಲ ವಾರು ವರ್ತಕರು ಹೋಗುತ್ತಿದ್ದರು. ಅವರನ್ನು ನೋಡಿದ ಕೂಡಲೇ ದೇಶದೇಶದಿಂದ ಬಂದವರೆಂದು ಸುನಾಯಾಸ ವಾಗಿ ಹೇಳಬಹುದಾಗಿತ್ತು.

ಬಹಳಕಾಲದ ನಂತರ ಮಾತೃದೇಶವನ್ನು ನೋಡುತ್ತಿದ್ದು ದರಿಂದ ಅವರ ಕಂಗಳಲ್ಲಿ ಆನಂದ ತುಳುಕಾಡುತಿತ್ತು. ಆ ಆನಂದವನ್ನು ಸದಾ ಅದೇ ದೇಶದಲ್ಲಿರುವವರು ಅನುಭ ವಿಸಲಸಾಧ್ಯ. ಅವರು ಪರದೇಶದವರೆಂದು ತಿಳಿಯಿತು. ಇದರ ನೆನಪಿನಿಂದ ನನಗೆ ಮತ್ತೆ ದೇಶಸಂಚಾರ ಮಾಡುವ ಮನಸ್ಸುಂಟಾಯಿತು. ನಾನು ಕೂಡಲೇ ಮಾರಾಟ ಯೋಗ್ಯವಾದ ಸರಕುಗಳನ್ನು ಯಥೇಚ್ಛವಾಗಿ ಕೊಂಡು ಕೊಂಡು ಬಸ್ರಾ ನಗರಕ್ಕೆ ಹೋದೆ. ಅಲ್ಲೊಂದು ಭಾರಿ ಹಡಗು ಪ್ರಯಾಣಕ್ಕೆ ಸಿದ್ಧವಾಗಿತ್ತು. ಹಡಗಿನಲ್ಲಿ ನನ್ನಂ ತಹ ವರ್ತಕರು, ಇತರೇ ಪ್ರಯಾಣಿಕರು ಬಹುಮಂದಿ ಇದ್ದರು. ಸರಕುಗಳನ್ನು ಆ ಹಡಗಿನಲ್ಲಿ ತುಂಬಿಸಿ ಕೊಂಡು, ಅದನ್ನೇರಿದೆ.

ಹೊಸ ಹೊಸ ಅನುಭವಗಳನ್ನೂ, ನೋಟಗಳನ್ನೂ ನೋಡಿ ಆನಂದಿಸುತ್ತಾ, ಸರಕುಗಳ ವಿಲೇವಾರಿ ಮಾಡುತ್ತಾ

ಆರನೇ ಪ್ರಯಾಣ

CHITRA

ಒಂದು ದೇಶದಿಂದ ಮತ್ತೊಂದು ದೇಶಕ್ಕೆ, ಒಂದು ನಗರದಿಂದ ಮತ್ತೊಂದು ನಗರಕ್ಕೆ ಪ್ರಯಾಣ ಸಾಗಿಸಿದೆವು. ಆದರೆ ಒಂದು ದಿನ ನಾವೆಲ್ಲರೂ ಹಡಗಿನಲ್ಲಿ ನಿಶ್ಚಿಂತೆಯಾಗಿ ವಿಶ್ರಾಂತಿ ಪಡೆಯುತ್ತಿರಲು, ನಮ್ಮ ಸರಂಗ್ ಗಟ್ಟಿಯಾಗಿ ಕೂಗಿಕೊಳ್ಳುತ್ತಾ, ತನ್ನ ತಲೆ ರುಮಾಲನ್ನು ಕೆಳಗೆಸದು, ಬಾಯಿ ಬಡಕೊಳ್ಳುತ್ತಾ, ಗಡ್ಡ ಕಿತ್ತುಕೊಳ್ಳುತ್ತಾ ನಮ್ಮ ಬಳಿಗೆ ಬಂದ.

ನಾವೆಲ್ಲರೂ ಅವನನ್ನು ಸುತ್ತುಗಟ್ಟಿ ಏನಾಯಿತೆಂದು ಕೇಳಿದೆವು. "ಸಹೋದರರಿರಾ, ನಾವು ದಾರಿತಪ್ಪಿ ಯಾವುದೋ ಹೊಸ ಸಮುದ್ರವನ್ನು ಪ್ರವೇಶಿಸಿರುವೆವು. ನಮ್ಮನ್ನು ಇನ್ನು ಅಲ್ಲಾ ರಕ್ಷಿಸಬೇಕು. ಎಲ್ಲರೂ ದೇವನನ್ನು ಪ್ರಾರ್ಥಿಸಿರಿ" ಎಂದ ಸರಂಗ್.

ಹೀಗೆಂದು ಹೇಳಿ ಆತನು ತೆರೆಚಾಪೆಗಳನ್ನು ಸರಿಪಡಿಸಲು ಸ್ತಂಭವನ್ನೇರಿದನು. ಇಷ್ಟರಲ್ಲಿ ಭಯಂಕರವಾದ ಗಾಳಿ ಬೀಸಿತು. ಗಾಳಿಯ ಹೊಡೆತಕ್ಕೆ ಚುಕ್ಕಾನಿ ಚೂರು ಚೂರಾಯಿತು. ಸರಂಗ್ ಕಂಭದಿಂದಿಳಿದು ಬಂದು "ಅಲ್ಲಾ ನನ್ನು ಮಿಾರಿಸಿದ ಶಕ್ತಿಯಿಲ್ಲ. ವಿಧಿಲಿಖಿತವನ್ನು ಯಾರೂ ತಡೆಗಟ್ಟಲಾರರು. ಸ್ನೇಹಿತರೇ, ನಮ್ಮ ಆಟ ಮುಗಿಯಿತು" ಎಂದನು.

ಪ್ರಯಾಣಿಕರೆಲ್ಲರೂ ರೋದಿಸುತ್ತಾ ಪರಸ್ಪರ ಬೀಳ್ಕೊಡಲಾರಂಭಿಸಿದರು. ಅಷ್ಟರಲ್ಲಿ ಗಾಳಿಯ ಸುಳಿವಿಗೆ ಸಿಕ್ಕಿ ಹಡಗು ಒಂದು ಪರ್ವತಕ್ಕೆ ತಗುಲಿ ನುಚ್ಚು ನೂರಾಯಿತು. ಕೆಲವು ಪ್ರಯಾಣಿಕರು ನೀರಿನಲ್ಲಿ ಮುಳುಗಿದರು. ಕೆಲವರು



ನೀರ ನಡುವೆಯಿದ್ದ ಬಂಡೆಗಳನ್ನು ಸೇರಿ ಹೇಗೋ ತಮ್ಮ ಪ್ರಾಣ ಉಳಿಸಿಕೊಂಡರು.

ಈ ಪರ್ವತ ಒಂದು ದೊಡ್ಡ ದ್ವೀಪದ ಅಂಚಿನಲ್ಲಿದ್ದು, ಸಮುದ್ರದೊಳಕ್ಕೆ ಚಾಚಿಕೊಂಡಿತ್ತು. ದ್ವೀಪದ ತೀರದಲ್ಲೆಲ್ಲಾ ಒಡೆದು ಹೋದ ಹಡಗುಗಳ ಅವಶೇಷಗಳಿದ್ದುವು. ಸರಕಿನ ಮೂಟೆಗಳು ಅನೇಕವು ಚಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಆ ಮೂಟೆಗಳಿಂದ ಬೆಲೆಬಾಳುವ ಸರಕುಗಳು, ಒಡವೆಗಳು ಹೊರಗೆ ಕಾಣಿಸುತ್ತಿದ್ದುವು. ಇವುಗಳ ನಡುವೆ ತಡವರಿಸಿಕೊಳ್ಳುತ್ತಾ ನಾವು ಹೇಗೋ ತೀರವನ್ನು ಸೇರಿಕೊಂಡೆವು.

ನಾನು ಕೊಂಚ ದೂರ ನಡೆದು ಒಂದು ಜಲಪಾತವನ್ನು ಸೇರಿದೆ. ಆ ಜಲಪಾತದ ನೀರು ಸಮುದ್ರವನ್ನು ಸೇರುವ ಬದಲಾಗಿ ಒಂದು



ಬೆಟ್ಟದ ಸೀಳುದಾರಿಯಲ್ಲಿ ಹೊರಟು ಆ ದ್ವೀಪದಲ್ಲಿ ಪ್ರವಹಿಸುತ್ತಾ ಸ್ವಲ್ಪ ದೂರ ಹೋಗಿ ಒಂದು ಗುಹೆಯನ್ನು ತೂರಿತ್ತು. ಆ ತೊರೆಯ ಇಕ್ಕಡೆ ದಡಗಳಲ್ಲಿ ಕೆಂಪು, ವಜ್ರ, ಬೆಳ್ಳಿ ಚಿನ್ನದ ತುಣುಕುಗಳಿದ್ದುವು. ತೊರೆಯಲ್ಲೂ ಸಹ ಸಣ್ಣ ಗುಂಡುಗಲ್ಲುಗಳ ಬದಲು ಅಮೂಲ್ಯವಾದ ರತ್ನಗಳಿದ್ದುವು. ಅವು ಧಗಧಗಿಸುತ್ತಿದ್ದುವು, ಆ ಪ್ರದೇಶದಲ್ಲಿ ಚೆಲ್ಲಿದ್ದ ಸಂಪತ್ತನ್ನು ಮನುಷ್ಯನು ಎಂದೂ ನೋಡಿರಲಾರನು. ಆ ದೃಶ್ಯ ಕಣ್ಣುಗಳನ್ನು ಕೋರೈಸುತ್ತಿದ್ದಿತು. ತೊರೆಯು ಹರಿಯುವ ಮಾರ್ಗದಲ್ಲಿ ಉತ್ತಮ ದರ್ಜೆಯ ಮುಸಾಂಬರದ ಮರಗಳಿದ್ದುವು.

ಆ ದ್ವೀಪದಲ್ಲಿ ಬಹು ವಿಚಿತ್ರವಾದ ಪ್ರವಾಹ ಒಂದಿತ್ತು. ಅದು ನೀರಿನ ಪ್ರವಾಹವಲ್ಲ. ಪರ್ವತದ ಮೇಲಿರುವ ಅಂಬರು ಬಿಸಿಲಿನ ಝಳಕ್ಕೆ ಕರಗಿ ಕಪ್ಪನೆ ತಾರಿನಂತಾಗಿ, ಪ್ರವಾಹವಾಗಿ ಸಮುದ್ರಕ್ಕೆ ಹರಿಯುತಿತ್ತು. ಸಮುದ್ರದಲ್ಲಿರುವ ಮೀನುಗಳು ಈ ಅಂಬರದ್ರವನ್ನು ಆತುರಾತುರದಿಂದ ಕುಡಿಯುವುವು. ಸ್ವಲ್ಪ ಸಮಯದನಂತರ ಆ ದ್ರವ ಅವುಗಳ ಹೊಟ್ಟೆಯಲ್ಲಿ ನಿಲ್ಲದೆ, ವಾಂತಿಯಾಗುವುದು. ಅದು ನೀರಿನಮೇಲೆ ತೇಲಿ, ಗಟ್ಟಿಯಾಗಿ ತೃಣಮಣಿಯಾಗಿ ದಡಕ್ಕೆ ಹೊಡೆದುಕೊಂಡು ಬರುವುದುಂಟು.

ಅಂಬರಿನ ಪ್ರವಾಹದಿಂದ ಮತ್ತು ತೃಣಮಣಿಯ ಮೂಲಕ ಈ ದ್ವೀಪದಲ್ಲೆಲ್ಲಾ ಸುವಾಸನೆ ಹರಡಿತ್ತು. ಇಷ್ಟು ಸಂಪತ್ತು ಇಲ್ಲಿದ್ದೂ ಸಹ ಮಾನವನಿಗೆ ಅದನ್ನು ಅನುಭವಿಸುವ ಅದೃಷ್ಟವಿರಲಿಲ್ಲ. ಏಕೆಂದರೆ ಈ ಪ್ರಾಂತಕ್ಕೆ ಬಂದ ನಾವೆಗಳು ನಾಶವಾಗುತ್ತಿದ್ದುವೇ ಹೊರತು ಒಂದಾದರೂ ಸ್ವದೇಶಕ್ಕೆ ಹಿಂತಿರುಗಿದ ಗೋಜಿಗೆ ಹೋದಂತಿಲ್ಲ.

ಪ್ರಾಣದಿಂದ ಈ ದ್ವೀಪವನ್ನು ಸೇರಿದ ನಾವು ಈ ಸಂಪತ್ತಿನ ನಡುವೆ ದಿಕ್ಕಿಲ್ಲದ ದರಿದ್ರರಾದೆವು. ಎಷ್ಟೋ ಔತಣ ಕೂಟಗಳನ್ನೇ ಏರ್ಪಡಿಸಲು ಅಗತ್ಯವಾದ ಹಣವಿದ್ದೂ ನಾವು ಕ್ಷುದ್ಬಾಧೆಯಿಂದ ದಹಿಸಿಹೋಗುತ್ತಿದ್ದೆವು. ನಮ್ಮ ಹತ್ತಿರವಿದ್ದ ಆಹಾರವನ್ನು ನಾವು ಸರಿಸಮವಾಗಿ ಹಂಚಿಕೊಂಡೆವು. ಆದರೆ ನನ್ನಂತೆ ಉಪವಾಸಕ್ಕೆ ಅಭ್ಯಾಸ ಹೊಂದದ ನನ್ನ ಸಂಗಡಿಗರು ತಮ್ಮಬಳಿಯಿದ್ದ ಆಹಾರವನ್ನು ಒಂದೆರಡು ಹೊತ್ತಿನಲ್ಲಿ ತಿಂದು, ಕೆಲವು ದಿನಗಳಿಗೆಲ್ಲ

ಒಬ್ಬೊಬ್ಬರಾಗಿ ಹಸಿವಿನ ಬಾಯಿಗೆ ತುತ್ತಾಗಿ ಸಾಯುತ್ತಿದ್ದರು. ನಾನು ಎಚ್ಚರಿಕೆಯಿಂದ ನನ್ನ ಪಾಲಿಗೆ ಬಂದ ಆಹಾರವನ್ನು ಮಿತವ್ಯಯವಾಗಿ ಉಪಯೋಗಿಸುತ್ತಿದ್ದೆ. ದಿನಕ್ಕೊಂದು ಬಾರಿ ಆಹಾರ ಸೇವಿಸುತ್ತಿದ್ದೆ.

ಮರಣಿಸಿದ ನಮ್ಮ ಮಿತ್ರರನ್ನು ಸಮುದ್ರ ತೀರದಲ್ಲಿ ಹೂಳುತ್ತಿದ್ದೆವು. ಶವಕ್ಕೆ ತೊಡಿಸಲು ಅಲ್ಲಿ ಯಥೇಚ್ಛವಾಗಿ ಬಟ್ಟೆಗಳಿದ್ದುವು. ಈಗಿನ ತೊಂದರೆಗಳು ಸಾಲದೆಂಬಂತೆ ಸಮುದ್ರದ ಮೇಲಿಂದ ಬೀಸಿದ ಗಾಳಿ ಎಲ್ಲರನ್ನೂ ಅನಾರೋಗ್ಯಕ್ಕೆ ಗುರಿಮಾಡಿತು. ನನ್ನ ಹೊರತಾಗಿ ಉಳಿದವರೆಲ್ಲರೂ ವಿವಿಧ ರೋಗಗಳಿಗೆ ಬಲಿಯಾದರು. ಕೊಟ್ಟಕೊನೆಗೆ ಮರಣ ಹೊಂದಿದಾತನನ್ನು ಸಮಾಧಿಮಾಡಿ, ನಾನೇ ಒಂಟಿಯಾಗಿ ನನ್ನ ಮರಣ ಯಾವಾಗ ಬರುತ್ತೋ ಎಂದು ಎದುರುನೋಡುತ್ತಾ ಆ ದ್ವೀಪದಲ್ಲಿ ಉಳಿದೆನು.

ಎಷ್ಟು ಮಿತವ್ಯಯದಿಂದ ಉಪಯೋಗಿಸಿದರೇನು? ನನ್ನ ಹತ್ತಿರವಿದ್ದ ಆಹಾರ ಕ್ರಮೇಣ ಮುಗಿಯುತ್ತಾ ಬಂದಿತು. 'ನಾನು ಸತ್ತು ಹೋದರೆ ನನ್ನ ಶವಕ್ಕೆ ಸ್ನಾನವನ್ನು ಮಾಡಿಸಿ, ಸಮಾಧಿ ಮಾಡಿಸುವವರು ಯಾರೂ ಇಲ್ಲವಲ್ಲಾ. ನಾನೇ ಏಕೆ ಮೊದಲೇ ಸಾಯಲಿಲ್ಲ?' ಎಂದು ಚಿಂತಿಸಿದೆ. ನನಗಾಗಿ ನಾನೊಂದು ಹಳ್ಳವನ್ನು ತೋಡಿಕೊಂಡೆ. ಅವಸಾನಕಾಲ ಪ್ರಾಪ್ತವಾದಾಗ ನಾನು ಆ ಹಳ್ಳದಲ್ಲಿ ಮಲಗಿದರೆ ವಾಯುದೇವನು ನನ್ನ ಸಮಾಧಿಯನ್ನು ಮಾಡುವನೆಂದು ನನ್ನ ಎಣಿಕೆ. ನನಗೆ ಆಗ ಉಂಟಾದ ವಿರಕ್ತಿ



ಭಾವವನ್ನು ಈಗ ವರ್ಣಿಸಲಾರೆ. "ಲೋ, ಸಿಂದಬಾದ್, ಐದು ಸಾರಿ ಸಾವಿನ ದವಡೆಯಿಂದ ತಪ್ಪಿಸಿಕೊಂಡರೂ ನಿನಗೆ ತಿಳುವಳಿಕೆ ಬಂದಿಲ್ಲ. ಒಲೆಯಲ್ಲಿ ಮಲಗಿದ ನಾಯಿಯಂತೆ ನೀನು ಯಥಾಸ್ಥಿತಿಗೆ ಬರುತ್ತಲೇ ಇರುವೆ. ಏಕೆ ನಿನಗಿಷ್ಟು ಧನದಾಹ. ನಿನ್ನ ಐಶ್ವರ್ಯವನ್ನು ಧಾರಾಳವಾಗಿ ಖರ್ಚು ಮಾಡಿದರೂ ಇನ್ನೂ ಮೂರು ತಲೆಮಾರುಗಳಿಗೆ ಸಾಕಾಗುವುದಲ್ಲಾ. ಅತ್ಯಾಶೆಯ ಫಲವನ್ನು ಈಗ ಅನುಭವಿಸು" ಎಂದು ಮೂದಲಿಸಿಕೊಂಡೆ.

ಆದರೆ ನನಗೆ ಕೂಡಲೇ ಒಂದು ಆಲೋಚನೆ ಹೊಳೆಯಿತು. ಆ ಗುಹೆಯನ್ನು ಪ್ರವೇಶಿಸಿದ ಪ್ರವಾಹದ ವಿಷಯವನ್ನು ತಿಳಿಯುವ ಕುತೂಹಲವುಂಟಾಯಿತು. ಅದು ಬೆಟ್ಟದ ಇನ್ನೊಂದು

ಪಾರ್ಶ್ವದ ಬಯಲಿಗೆ ಬಂದಿರಬೇಕು. ಆ ಪ್ರವಾಹ ಎಲ್ಲಿಗೆ ಹೋಗುವುದು? ಅಲ್ಲೇನಿರುವುದು? ಇಲ್ಲಿ ಸುಮ್ಮನೆ ದಿಕ್ಕೆಟ್ಟ ಸಾವು ಸಾಯುವುದಕ್ಕಿಂತಲೂ ಆ ಪ್ರವಾಹದ ವಿಷಯವನ್ನಾದರೂ ತಿಳಿದುಕೊಳ್ಳುವ ಪ್ರಯತ್ನದಲ್ಲಿ ಸಾಯುವುದು ಮೇಲೆನಿಸಿತು.

ನನ್ನಲ್ಲಿ ಒಂದು ಹೊಸವುತ್ಸಾಹ, ಹುಮ್ಮಸ್ಸು ಉಂಟಾಯಿತು. ನಾನು ಕೆಲವು ದೊಡ್ಡ ಮುಸಾಂಬರದ ಕೊಂಬುಗಳನ್ನು ಆರಿಸಿ, ಅವುಗಳಿಂದ ಒಂದು ತೆಪ್ಪವನ್ನು ತಯಾರುಮಾಡಿದೆ. ಅದರ ಮೇಲೆ ಒಡೆದುಹೋದ ಹಡಗುಗಳ ಹಲಗೆಗಳನ್ನು ಹಾಕಿದೆ. ಕಣ್ಣಿಗೆ ಕಾಣಿಸಿದ, ಕೈಗೆ ಸಿಕ್ಕಿದ ಮಣಿಮಾಣಿಕ್ಯಗಳನ್ನು, ತೃಣಮಣಿಗಳನ್ನು ಆರಿಸಿ ಮೂಟೆಕಟ್ಟಿ ತೆಪ್ಪದಮೇಲೆ ರಾಶಿ ಹಾಕಿದೆ. ತರುವಾಯ ನನ್ನಲ್ಲಿ ಉಳಿದಿದ್ದ ಆಹಾರದೊಂದಿಗೆ ತೆಪ್ಪವನ್ನು ಹತ್ತಿ, ಎರಡು ಮರದ ತುಂಡುಗಳನ್ನು ಹುಟ್ಟುಗಳಂತೆ ಉಪಯೋಗಿಸುತ್ತಾ ಹೊಳೆಯಲ್ಲಿ ಪ್ರಯಾಣಮಾಡಿದೆ. ನನ್ನ ತೆಪ್ಪ ತೊರೆಯಲ್ಲಿ ತೇಲುತ್ತಾ ಹೋಗಿ ಆ ಗುಹೆಯನ್ನು ಹೊಕ್ಕಿತು.

ಒಳಗೆ ಗಾಢಾಂಧಕಾರ. ತೊರೆ ಡೊಂಕು ಡೊಂಕಾಗಿ ಹರಿದರೆ ತೆಪ್ಪ ಸಹ ಅತಿ ವೇಗವಾಗಿ ಸುಳಿಸುಳಿದು ಪಕ್ಕದಲ್ಲಿದ್ದ ಬಂಡೆಗೆ ತಾಕುತಿತ್ತು. ಆಗಾಗ ನನ್ನ ತಲೆ ಕಲ್ಲಿನ ಸೂರಿಗೆ ತಾಕುತಿತ್ತು. ಅದರಿಂದ ತಪ್ಪಿಸಿಕೊಳ್ಳಲೂ ಸಾಧ್ಯವಿರಲಿಲ್ಲ. ಏಕೆಂದರೆ ಆ ಗುಹೆ ಕತ್ತಲುಮಯವಾಗಿತ್ತು. ಕಣ್ಣಲ್ಲಿ ಕಣ್ಣಿಟ್ಟು ನೋಡಿದರೂ ಏನೂ ಕಾಣಿಸುತ್ತಿರಲಿಲ್ಲ. "ಈ ಅಂಧಕಾರ ಕೂಪದಲ್ಲೇಕೆ ಪ್ರವೇಶಿಸಿದೆ, ದೇವರೆ? ನದಿತೀರದಲ್ಲೇ ಮರಣಿಸಿದ್ದರೆ ಚೆಲೋದಾಗಿತ್ತಲ್ಲಾ' ಎಂದು ಅಂದುಕೊಂಡೆ. ಆದರೆ ಹಿಂತಿರುಗಲು ಮಾರ್ಗವಿಲ್ಲ. ತೊರೆ ಇಳಿಜಾರಾದ ಪ್ರದೇಶದಲ್ಲಿ ಹರಿಯುತ್ತಿದ್ದಂತೆ ಒತ್ತಡ ಪ್ರಬಲವಾಗುತಿತ್ತು.

ನಾನು ಹಿಡಿದಿದ್ದ ಹುಟ್ಟುಗಳು ನಿರುಪಯೋಗವಾದುವು. ಅಂತಲೇ ನಾನು ಅವುಗಳನ್ನು ತೊರೆದು ತೆಪ್ಪವನ್ನು ಹಿಡಿದುಕೊಂಡು ಬೋರಲು ಮಲಗಿದೆ. ಇಲ್ಲದಿದ್ದರೆ ನನ್ನ ತಲೆ ಸಿಡಿದು ಹೋಗುವಂತೆ ಭಾಸವಾಯಿತು. ತುಂಬಾ ಬಳಲಿದ್ದೆನಾದುದರಿಂದ ಸ್ಮೃತಿತಪ್ಪಿದವನಂತೆ ಮಲಗಿಕೊಂಡು ನಿದ್ರೆಹೋದೆ. (ಇನ್ನೂ ಇದೆ)





# ತೋಳದ ತಂತ್ರ

ಮೊಲ ತನಗೆ ಶಾಸ್ತಿ ಮಾಡಿದಾಗಿನಿಂದ ನರಿ ಕುದಿದುಹೋಗುತಿತ್ತು. ಈ ಅವಮಾನವನ್ನು ಮರೆಯಲು ನರಿಗಾಗಲಿಲ್ಲ. ಅದನ್ನೇ ನೆನೆದು ನೆನೆದು ಬಳಲಿ ಬಾಡಿಹೋಗುತಿತ್ತು.

ಒಂದುದಿನ ಆ ನರಿ ಎತ್ತೋ ಹೋಗುವಾಗ ಒಂದು ತೋಳ ಎದುರು ಬಂದು—"ಇದೇನು ನರಿಬಾವ, ಸೊರಗಿ ಸಣ್ಣಾಗಿದ್ದೀಯಾ! ಏನು ಮೈ ಸರಿಯಿಲ್ಲವೆ?" ಎಂದು ಕೇಳಿತು.

ನರಿ ಸಿಡಿಮಿಡಿಯಿಂದ—"ಆ ಹಾಳುಮೊಲವನ್ನು ಕೊಂದು ತಿಂದರೇನೇ ನನ್ನ ರೋಗ ಹೋದೀತು" ಅಂದಿತು.

ಮೊಲವು ನರಿಯನ್ನು ಸೋಲಿಸಿದ ಒಳ್ಳೇ ಸ್ವಾರಸ್ಯವಾದ ಸಂಗತಿ ಆಗಲೇ ಕಾಡಿನೊಳಗೆಲ್ಲಾ ಗೊತ್ತಾಗಿಬಿಟ್ಟಿತ್ತು. ಆದರೂ ತೋಳ ತನಗೆ ಏನೂ ಗೊತ್ತಿಲ್ಲದಂತೆ "ಏನು, ಏನು ಸಂಗತಿ?" ಅಂತ ಕೇಳಿತು.

ನರಿ ಎಲ್ಲ ವಿಷಯ ಹೇಳಿತು.

ಎಲ್ಲಾ ಕೇಳಿ ತೋಳ "ಫು, ಇಷ್ಟೇನಾ? ಈ ಅಲ್ಪ ವಿಷಯಕ್ಕೆ ಚಿಂತೆಮಾಡ ಬೇಕೆ? ಈ ದಿನ ಸಂಜೀವೊಳಗೆ ಆ ಮೊಲದ ಕತೆ ಮುಗಿಸಿ ಬಿಡುವ!" ಅಂದಿತು.

"ಅದು ಹೇಗೆ? ಏನು ನಿನ್ನ ಉದ್ದೇಶ?" ಎಂದು ನರಿ ಕೇಳಿತು.

"ನಾನು ಮೋಸದ ಮಾತಿನಿಂದ ಆ ಮೊಲವನ್ನು ನಿನ್ನ ಮನೆಗೆ ಕರೆಸುತ್ತೇನೆ ನೋಡು" ಎಂದಿತು ತೋಳ.

"ಸುಳ್ಳು ಮಾತು. ನನ್ನ ಮನೆಗೆ ಬರಲಿಕ್ಕೆ ಆ ಮೊಲಕ್ಕೆ ಹುಚ್ಚೇ ಭ್ರಮೆಯೆ? ಎಂದೂ ಬಾರದು" ಎಂದಿತು ನರಿ.

"ಅದೆಲ್ಲಾ ನನಗೆ ಬಿಡು. ಈಗ ನಾನು ಹೇಳಿದ ಹಾಗೇ ಮಾಡು. ಏನೂ ಕಷ್ಟವಿಲ್ಲ. ನೀನು ಮನೆಗೆ ಹೋಗಿ ಸತ್ತುಹೋದ ಹಾಗೆ ಮಂಚದಲ್ಲಿ ಕೈ ಕಾಲು ಚಾಚಿ ಕದಲದೆ ಬಿದ್ದುಕೋ ಮೊಲ ಬಂದು ನಿನ್ನ ಮೇಲೆ ಕೈಯಿಟ್ಟ ಕೂಡಲೆ ಗಪ್ಪಂತ ಹಿಡುಕೊ" ಅಂದಿತು ತೋಳ.

ಈ ಮಾತು ಕೇಳಿದ ಕೂಡಲೇ ನರಿಗೆ ಪರಮಾನಂದವಾಯಿತು. ಮನೆಗೆ ಹೋಗಿ ಮಂಚದಲ್ಲಿ ಸತ್ತಹಾಗೆ ಬಿದ್ದು ಕೊಂಡಿತು.

ಎಸ್. ನಂಜುಂಡಯ್ಯ

ಇಷ್ಟರೊಳಗೆ ತೋಳ ಮೊಲದ ಮನೆಗೆ ಹೋಗಿ ಬಾಗಿಲು ತಟ್ಟಿತು. ಒಳಗಿಂದ ಮೊಲ "ಯಾರವರು?" ಎಂದು ಕೇಳಿತು.

"ನಾನೇ ತೋಳ, ಮತ್ತಾರಲ್ಲ. ಒಮ್ಮೆ ಬಾಗಿಲು ತೆಗಿ. ನಿನಗೊಂದು ಕೆಟ್ಟಸುದ್ದಿ ತಿಳಿಸು ವಾಂತ ಬಂದೆ" ಎಂದಿತು ತೋಳ.

"ಕೆಟ್ಟ ವಾರ್ತೆಯೊ? ಹಾಗಾದರೆ ಅಗತ್ಯ ವಾಗಿ ಕೇಳಲೇ ಬೇಕು" ಎನ್ನುತ್ತಾ ಮೊಲ ಬಾಗಿಲನ್ನು ತೆರೆಯಿತು.

"ಆ ನರಿ ಉಂಟಲ್ಲ ಪಾಪ, ಫಕ್ಕನೆ ಸತ್ತು ಹೋಯಿತು. ನೀನು ಹೋಗಿ ಒಮ್ಮೆ ನೋಡಿ ಬಾ" ಅಂದಿತು ತೋಳ.

"ಅಯ್ಯೊ! ಸತ್ತುಹೋಯಿತೆ? ಮತ್ತೆ ನೀನು ಉತ್ತರಕ್ರಿಯೆ ಮಾಡದೆ ಹಾಗೇ ಬಂದಿಯಾ?" ಎಂದು ಕೇಳಿತು ಮೊಲ.

"ಇಕೋ, ಆ ಕೆಲಸಕ್ಕೇ ಹೊರಟಿದ್ದೇನೆ" ಎಂದು ತೋಳ ಜಾರಿಕೊಂಡಿತು.

ನರಿಯನ್ನು ನೋಡಲು ಹೋಗಬೇಕೇ ಬೇಡವೇ ಅಂತ ಸ್ವಲ್ಪಹೊತ್ತು ಮೊಲ ಯೋಚನೆ ಮಾಡಿತು. 'ಹೋಗಿ, ನಿಜ ಸಂಗತಿ ತಿಳಿದು ಕೊಳ್ಳುವ' ಎಂದು ನಿಶ್ಚಯಿಸಿಕೊಂಡು, ನರಿಯ ಮನೆಗೆ ಹೋಗಿ ಮೆಲ್ಲನೆ ಬಾಗಿಲು ದೂಡಿ ಒಳಗೆ ಇಣಿಕಿ ನೋಡಿತು. ಕೈ ಕಾಲು ಬಿಟ್ಟು ಬಿದ್ದಿರುವ ನರಿಯನ್ನು ನೋಡಿ, "ಪಾಪ! ಶವವನ್ನು ನೋಡಲು ಯಾರೂ ಬಂದಿಲ್ಲ. ನನಗೋ ತುಂಬಾ ಕೆಲಸ. ಆದರೂ ಶವವನ್ನು ಕಾಯುತ್ತಾ ಇರುತ್ತೇನೆ" ಎಂದಿತು.

ಮತ್ತೆ ಸ್ವಲ್ಪಹೊತ್ತು ತಾಳಿ ಮೊಲ ಹೀಗೆ ಹೇಳಿತು: "ನರಿಬಾವ ನಿಜಕ್ಕು ಸಾಯಲಿಲ್ಲಾಂತ ಕಾಣುತ್ತೆ. ಯಾಕಂದರೆ ತಮ್ಮನ್ನು ನೋಡ ಬಂದಾಗ ಸತ್ತವರು ಹಿಂದಿನ ಕಾಲನ್ನು ಚಾಚಿ 'ಓಹೋ' ಅನ್ನುತ್ತಾರಲ್ಲಾ! ನರಿಬಾವ ಹಾಗೆ ಅನ್ನೋದಿಲ್ಲ ಯಾಕೊ? ಸಾಯಲಿಲ್ಲಾಂತ ಕಾಣುತ್ತೆ. ಇನ್ನೂ ಸ್ವಲ್ಪ ನಿಧಾನವಾಗಿ ಸಾಯುತ್ತಾನೋ ಏನೋ? ಮತ್ತೆ ಯಾಕೆ ನಾನು ಹೆಣವನ್ನು ಸುಮ್ಮನೆ ಕಾಯಬೇಕು. ಹೋಗುತ್ತೇನೆ"

ಈ ಮಾತು ಕೇಳಿದ ಕೂಡಲೇ ನರಿ ತನ್ನ ಕಾಲು ತುಸು ಮೇಲೆ ಚಾಚಿ, "ಓಹೋ" ಅಂದಿತು. ಮೊಲ ತಕ್ಷಣ ಓಡಿಹೋಯಿತು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1957 ಆಗಸ್ಟ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :






ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಜೂನ್ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: **ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು - 26.**

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ಸೆರೆಮನೆಯಲ್ಲಿದ್ದರೂ ಸಹಕಾರ ಬೇಕು

ಎರಡನೇ ಫೋಟೋ: ದೊರೆಮನೆಯಲ್ಲಿದ್ದರೂ ಧರೆಯ ಸಿಹಿನೀರು ಬೇಕು

ಕಳಿಸಿದವರು: ಕೆ. ಸರ್ವೋತ್ತಮ

C/O ಕೆ. ಸಣ್ಣಯ್ಯ, ಕುಂಬಳೆ, ಅರಿಕಾಡಿ, ದ. ಕ.

**ಬಹುಮಾನ ರೂ. 10/-ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.**

# ಹಾ ವು ಗ ಳು

**ಹಾ**ವುಗಳುಕೂಡಾ ಸರೀಸೃಪಗಳಾಗಿವೆ. ಪ್ರಪಂಚದಲ್ಲಿ ಎರಡು ಸಾವಿರಕ್ಕೂ ಮಿಕ್ಕಿದ ಹಾವಿನ ಜಾತಿಗಳಿವೆ. ಇವುಗಳಲ್ಲಿ ಕೆಲವು ಬಲು ಚಿಕ್ಕವು; ಮತ್ತೆ ಕೆಲವು 30, 40 ಅಡಿಗಳಷ್ಟು ಇರುತ್ತವೆ. ಆದರೆ ಕೆಲವು ಲಕ್ಷಣಗಳು ಎಲ್ಲಕ್ಕೂ ಸಮಾನವಾಗಿರುತ್ತವೆ.

ಈ ಲಕ್ಷಣಗಳಲ್ಲಿ ಒಂದು ಏನಂದರೆ, ಎಲ್ಲಾ ಹಾವುಗಳೂ ಹೊಟ್ಟೆಯಿಂದ ಹರಿಯುತ್ತವೆ. ಯಾವ ಹಾವಿಗೂ ಕಾಲುಗಳಿಲ್ಲ. ಅವುಗಳು ಅಡಿಭಾಗದಲ್ಲಿರುವ ಪರೆಗಳಿಂದ ನೆಲವನ್ನು ಹಿಡಿದುಕೊಂಡು ಕದಲುತ್ತವೆ. ನುಣ್ಣಗಿನ ನೆಲದಲ್ಲಿ ಅವುಗಳಿಗೆ ಪಟ್ಟು ಸಿಕ್ಕುವುದಿಲ್ಲ. ಗರಕುನೆಲದಮೇಲೆ ಹಾವುಗಳು ವೇಗವಾಗಿ ಓಡಬಲ್ಲವು. ಕೆಲವುಜಾತಿ ಹಾವುಗಳು ಈಜುತ್ತವೆ. ಕೆಲವು ಮರಗಳನ್ನೇರುತ್ತವೆ.

ಹಾವುಗಳ ಶರೀರದಲ್ಲಿ ಪೊರೆಗಳಿರುತ್ತವೆ. ಮೈಮೇಲೆಲ್ಲಾ ಬಣ್ಣಬಣ್ಣದ ಮಚ್ಚೆಗಳು ನೋಡಲು ಸುಂದರವಾಗಿರುತ್ತವೆ.

ಹಾವುಗಳಿಗೆ ದಂತಗಳುಂಟು. ಆದರೆ ಹಾವುಗಳು ಇವುಗಳನ್ನು ಆಹಾರ ಜಗಿಯಲು ಉಪಯೋಗಿಸುವುದಿಲ್ಲ. ಹಾವುಗಳು ಆಹಾರವನ್ನು ಹಾಗೇ ನುಂಗಿಬಿಡುತ್ತವೆ. ಅವುಗಳ ದಂತ ಒಳಕ್ಕೆ ಬಾಗಿಕೊಂಡಿವೆ. ವಿಷಸರ್ಪಗಳ ದಂತಗಳು ಟೊಳ್ಳಾಗಿರುತ್ತವೆ. ಆ ಟೊಳ್ಳಿನೊಳಗೆ ವಿಷವಿರುತ್ತದೆ. ಕಡಿದವರ ಶರೀರಕ್ಕೆ ವಿಷವಿಳಿಯುತ್ತದೆ.

ಎಲ್ಲಾ ಹಾವಿನ ವಿಷವೂ ಮನುಷ್ಯರನ್ನು ಕೊಲ್ಲುವುದಿಲ್ಲ. ಕೆಲವುಗಳ ವಿಷವೇ ಪ್ರಾಣಾಪಕಾರಿ. ಹೆಬ್ಬಾವುಗಳು ತಮ್ಮ ದೇಹವನ್ನು ಪ್ರಾಣಿಗಳಸುತ್ತೂ ಹಾಕಿ ಒತ್ತಿ ಕೊಂದುಬಿಡುತ್ತವೆ.



ಹಾವುಗಳ ಆಹಾರಗಳು ಬಹಳ ವಿಚಿತ್ರವಾಗಿವೆ. ಹಾವುಗಳ ಮುಖಗಳು ಚಿಕ್ಕದಾಗೇ ಕಾಣಿಸಿದರೂ ಅವು ತಮಗಿಂತ ಅನೇಕ ಪಾಲು ದೊಡ್ಡ ಜಂತುಗಳನ್ನಾದರೂ ನುಂಗ ಬಲ್ಲುವು. ಒಂದು ಹಾವು 24 ಗಂಟೆಯ ಕಾಲದಲ್ಲಿ ನಾಲ್ಕು ಕರಿಮರಿಗಳನ್ನು ನುಂಗಿತು. ಇನ್ನೊಂದು 93 ಪೌಂಡು ಭಾರವಿರುವ ಮೇಕೆಯನ್ನು ಒಂದೂ ವರೆ ಗಂಟೆಯಲ್ಲಿ ನುಂಗಿತು. ಮತ್ತೊಂದು ಹಾವು ಒಂದು ಹೊತ್ತಿನೊಳಗೇ 31 ಪೌಂಡು ಭಾರವಿರುವ ಮೇಕೆಯನ್ನೂ 43 ಪೌಂಡು ಭಾರದ ಕಡವೆಯನ್ನೂ ನುಂಗಿತು. ಆದರೆ ಇಷ್ಟು ದೊಡ್ಡ ಭಾರಾಹಾರ ನುಂಗುವ ಹಾವುಗಳು ವಿಷಸರ್ಪಗಳಲ್ಲ.

ಕೆಲವು ಹಾವುಗಳು ಇತರ ಹಾವುಗಳನ್ನೂ ನುಂಗುತ್ತವೆ. ಒಂದೂ 'ಜೂ'ನಲ್ಲಿದ್ದ ಹಾವು ತನಗಿಂತ ಸ್ವಲ್ಪಮಾತ್ರ ಚಿಕ್ಕದಾದ ಹಾವನ್ನು ನುಂಗಿತಂತೆ!

ಹಾವುಗಳು 18 ತಿಂಗಳವರೆಗೆ ಅಹಾರವಿಲ್ಲದೆ ಇರಬಲ್ಲುವು. ಇದರಿಂದಲೇ ಅವುಗಳಿಗೆ ಪವನಾಹಾರಿಗಳೆಂದು ಹೆಸರುಂಟಾಗಿರಬೇಕು. ಆದರೆ ಹಾವುಗಳು ನೀರಿಲ್ಲದೆಮಾತ್ರ ಬದುಕ ಲಾರವು. ಹಾವುಗಳು ಬಹಳ ಕಾಲದವರೆಗೆ ಬಳೆಯುತ್ತವೆ. ಇದಕ್ಕಾಗಿ ಅವುಗಳು ವರುಷಕ್ಕೆ ಐದಾರುಸಾರಿ ಪರೆಕಳಚುತ್ತವೆ.

ಆಫ್ರಿಕಾದಲ್ಲಿರುವ ಕೆಲಬಗೆಯ ಕೃಷ್ಣಸರ್ಪಗಳು ದೂರದಲ್ಲಿದ್ದೇ ತಮ್ಮ ಬಾಯಲ್ಲಿದ್ದ ವಿಷ ವನ್ನು ಇತರ ಜಂತುಗಳ ಕಣ್ಣಿಗೆ ಗುರಿಯಿಟ್ಟು ಉಗುಳುತ್ತವೆ. ಈ ವಿಷವು ಕೊಲ್ಲು ವಂಥಾದ್ದಲ್ಲ. ಆದರೆ ಕಣ್ಣು ಹೋಗಲಾಡಿಸುತ್ತದೆ.

ಮನುಷ್ಯರು ಹಾವನ್ನು ಶತ್ರುವಾಗೇ ನೋಡುತ್ತಾನೆ. ಕಂಡಲ್ಲೆಲ್ಲಾ ಹಾವನ್ನು ಕೊಲ್ಲು ತ್ತಾರೆ. ಕೆಲವು ಹಾವು ಮಾನವರಿಗೆ ಅಪಕಾರಮಾಡುವುದಿಲ್ಲ, ಬದಲಾಗಿ ಉಪಕಾರವೇ ಮಾಡುತ್ತವೆ. ಹೊಲಗಳಲ್ಲಿರುವ ಇಲಿ ಮೊದಲಾದ ಕ್ಷುದ್ರಜಂತುಗಳನ್ನು ಇವು ಕೊಲ್ಲುತ್ತವೆ.






ಪ್ರೊಫೆಸರ್ ಪಿ. ಸಿ. ಸರ್ಕಾರ್

ಇದು ಬಹಳ ಸುಲಭವಾಗಿ, ಹೆಚ್ಚು ಸಾಮಾನುಗಳಿಲ್ಲದೆ ಪ್ರದರ್ಶಿಸತಕ್ಕ ಟ್ರಿಕ್ಕು.

ಐಂದ್ರಜಾಲಿಕನು ತನ್ನ ಅಂಗಿ ಜೇಬಿ




ನಿಂದ ಮೊದಲು ಒಂದು ಗೊಟ್ಟವನ್ನು ತೆಗೆದು ಪ್ರೇಕ್ಷಕರಿಗೆ ತೋರಿಸುತ್ತಾನೆ. ಈ ಗೊಟ್ಟವು ಒಂದು ಬೆಂಕಿ ಕಡ್ಡಿಗಿಂತ ಸ್ವಲ್ಪ ದೊಡ್ಡದಾಗಿರುತ್ತದೆ. ಅದರ ಎರಡು ಬದಿ ಯಲ್ಲೂ ಬಾಯಿ ತೆರೆದಿರುತ್ತದೆ. ತರುವಾಯ ಐಂದ್ರಜಾಲಿಕನು ತನ್ನ ಜೇಬಿನಿಂದ ಒಂದು ಬೆಂಕಿಪೆಟ್ಟಿಗೆಯನ್ನು ತೆಗೆದು ಅದರಿಂದೊಂದು ಬೆಂಕಿ ಕಡ್ಡಿಯನ್ನು ಹೊರಕ್ಕೆ ತೆಗೆಯುತ್ತಾನೆ. ಅನಂತರ ತಾನು ಮೊದಲು ತೋರಿಸಿದ ಗೊಟ್ಟವನ್ನು ನೆಟ್ಟಗೆ ಹಿಡಿದುಕೊಂಡು ತಾನು ತೆಗೆದ ಬೆಂಕಿ ಕಡ್ಡಿಯನ್ನು ತಲೆಕೆಳಗಾಗಿ ಮೇಲಿನಿಂದ ಕೆಳಕ್ಕೆ ಬರುವಹಾಗೆ ಹೊಗಿಸುತ್ತಾನೆ. (1 ನೇ ಚಿತ್ರ ನೋಡಿ) ಐಂದ್ರಜಾಲಿಕನು ಬೆಂಕಿಕಡ್ಡಿಯನ್ನು ಗೊಟ್ಟದ ಕೆಳಗಿನ ತುದಿಯಿಂದ ಹೊರಕ್ಕೆಳೆದಾಗ ಆ ಬೆಂಕಿಕಡ್ಡಿಯ ತಲೆ ಕೆಳಗಾಗಿರುತ್ತದೆಂದು ಎಲ್ಲರೂ ಅಂದುಕೊಂಡಿರುತ್ತಾರೆ. ಆದರೆ ಬೆಂಕಿಕಡ್ಡಿಯ ತಲೆ ಮೇಲಕ್ಕೇ ಇದ್ದು, ಆಶ್ಚರ್ಯಪಡುಸುತ್ತದೆ! (2 ನೇ ಚಿತ್ರ ನೋಡಿ.)

ಅಂತೆಯೇ ಈ ಟ್ರಿಕ್ಕಿಗೆ "ತಲೆಕೆಳಗಿನ ಬೆಂಕಿಕಡ್ಡಿ" ಎಂದು ಹೆಸರು.

ಇನ್ನು ಈ ಟ್ರಿಕ್ಕಿನಲ್ಲಿರುವ ರಹಸ್ಯವನ್ನು ಕೇಳಿ, ಇದೆಷ್ಟು ಸುಲಭವೋ ನೋಡಿ.

ಈ ಆಟಕ್ಕಾಗಿ ಉಪಯೋಗಿಸುವ ಬೆಂಕಿ ಕಡ್ಡಿ ಮಾಮೂಲು ಬೆಂಕಿಕಡ್ಡಿಯಲ್ಲ. ಎರಡು ಬದಿಯಲ್ಲಿಯೂ ಕಪ್ಪಗಿನ ತಲೆಯಿರುವ ಹಾಗೆ ಒಂದು ಬೆಂಕಿಕಡ್ಡಿಯನ್ನು ಐಂದ್ರಜಾಲಿಕನು ಮೊದಲೇ ತಯಾರಿಸಿಕೊಂಡು ತನ್ನಲ್ಲಿಟ್ಟುಕೊಂಡಿರುತ್ತಾನೆ. ನಾನು ಮಯಣವನ್ನುಪಯೋಗಿಸಿ ಅದಕ್ಕೆ ರಂಗು ಹಾಕುತ್ತೇನೆ. ಅದು ನಿಜವಾದ ಬೆಂಕಿಕಡ್ಡಿಯ ತಲೆಹಾಗೇ ಕಾಣಿಸುವಂತೆ ಮಾಡಿಕೊಳ್ಳುತ್ತೇನೆ.

ಈ ವಿಧವಾಗಿ ಎರಡು ತಲೆಗಳ ಬೆಂಕಿ ಕಡ್ಡಿಯನ್ನು ತಯಾರಿಸಿಕೊಂಡ ಮೇಲೆ ಉಳಿದುದೆಲ್ಲಾ ಬಹಳ ಸುಲಭ. ಆಕರ್ಷಣೀಯವಾಗಿ ಬುದ್ಧಿವಂತಿಕೆಯಿಂದ ಪ್ರದರ್ಶಿಸುವುದೊಂದೇ ಬಾಕಿ.

ಐಂದ್ರಜಾಲಿಕನು ಈ ಎರಡು ತಲೆಗಳ ಬೆಂಕಿಕಡ್ಡಿಯನ್ನು ಮಾಮೂಲು ಬೆಂಕಿ ಪೆಟ್ಟಿಗೆಯೊಳಗೇ ಇಟ್ಟುಕೊಂಡು, ಪ್ರೇಕ್ಷಕರಿಗೆ ತೋರಿಸಲಿಕ್ಕೆ ತೆಗೆದಾಗ ಆ ಬೆಂಕಿ ಕಡ್ಡಿಯ ಒಂದು ತಲೆಯನ್ನು ತನ್ನ ಬೆರಳುಗಳ ಸಂದಿನಲ್ಲಿ ಕಾಣಿಸದಂತೆ ಹಿಡಿದುಕೊಳ್ಳುತ್ತಾನೆ. ಅವನು ಅದನ್ನು ಗೊಟ್ಟಿದಲ್ಲಿ ಹೊಗಿಸುವಾಗ ತಲೆ ಕೆಳಗಾಗಿರುವಂತೆ ಕಾಣಿಸುತ್ತದೆ. ಮತ್ತೆ ಅದನ್ನು ಗೊಟ್ಟದ ಅಡಿಯಿಂದ ಎಳೆದಾಗ ಕಡ್ಡಿಯ ಎರಡನೇ ತಲೆ ಬೆರಳ ಸಂದಿನಲ್ಲಿದ್ದುಕೊಂಡು ಬೆಂಕಿಕಡ್ಡಿಯ ತಲೆ ಮೇಲಕ್ಕೆ ತಿರುಗಿಕೊಂಡತೆಯೇ ಆಶ್ಚರ್ಯವಾಗಿ ಕಾಣುತ್ತದೆ.

ಯೂರಪ್‌ನಲ್ಲಿ ಅಟ್ಟೆಯಿಂದ ಮಾಡಿದ ಬೆಂಕಿಕಡಿಯನ್ನು ಉಪಯೋಗಿಸುತ್ತಾರೆ. ಅಲ್ಲಿ ಈ ಟ್ರಿಕ್ಕಿಗೆ ಇನ್ನೊಂದು ಪದ್ಧತಿ ಅನುಸರಿಸಬೇಕು. ಆ ಬೆಂಕಿಕಡ್ಡಿಯನ್ನು ನೆಟ್ಟಗೆ ಎರಡಾಗಿ ಸೀಳಿ ಎರಡು ಭಾಗಗಳನ್ನು ಕೆಳಗೆ ಮೇಲೆ ಮಾಡಿ ಮತ್ತೆ ಅಂಟಿಸಬೇಕು.




(3 ನೇ ಚಿತ್ರ ನೋಡಿ) ಈ ಕಡ್ಡಿಗೆ ಎರಡು ಬದಿಯೂ ತಲೆಗಳಿದ್ದರೂ ಒಂದೊಂದು ತಲೆಯೂ ಒಂದೊಂದು ಬದಿಯಲ್ಲೇ ಕಾಣಿಸುತ್ತದೆ. ಆದುದರಿಂದ ಐಂದ್ರಜಾಲಿಕನು ಕಡ್ಡಿಯನ್ನು ಹೊರಕ್ಕೆಳೆಯುವಾಗ ಅದನ್ನು ತಿರುಗಿಸಿಕೊಳ್ಳಬೇಕು.



# ವಾರ್ತೆಗಳು-ವಿಶೇಷಗಳು

**ಭಾ**ರತದ ವಿಮಾನದಳದ ೨೪ ನೇ ವಾರ್ಷಿಕೋತ್ಸವದ ಸಂದರ್ಭದಲ್ಲಿ ನ್ಯೂ ಢಿಲ್ಲಿಯಲ್ಲಿ ಚಿತ್ರ ವಿಚಿತ್ರವಾದ ಗತಿಗಳಲ್ಲಿ ವಿಮಾನ ವಿನ್ಯಾಸಗಳು ನಡೆದುವು. ಪ್ರಧಾನಿ ನೆಹರುಗಳು ಪಾಲಂ ವಿಮಾನಾಶ್ರಯದಲ್ಲಿ ಇವುಗಳನ್ನು ನೋಡಿ ಸೈನಿಕ ವಂದನೆ ಸ್ವೀಕರಿಸಿಕೊಂಡರು. ಜಾತೀಯ ಯುವಜನ ದಳಕ್ಕೆ ಸೇರಿದ ವೈಮಾನಿಕ ಶಾಖೆಯವರು ನಡೆಸಿದ ವಿನ್ಯಾಸಗಳ ಮೇಲೆ ನೆಹರುಗಳು ಬಹಳ ಆಸಕ್ತಿ ವಹಿಸಿದರು. ಇವರು ನಡೆಸಿದ ಚಿಕ್ಕ ಚಿಕ್ಕ ವಿಮಾನಗಳು ಕೆಲವು ಗಂಟೆಗೆ ೧೦೦-೧೨೦ ಮೈಲು ಹಾರುವಂತಹುವಂತೆ.

* * *

**ಹೈ**ದ್ರಾಬಾದಿನ ಪರಿಸರ ಪ್ರಾಂತದಲ್ಲಿರುವ ಸ್ಫಟಿಕ ಪಕಳೆಗಳು ಪ್ರಸ್ತುತ ಬೊಂಬಾಯಿ ಮೊದಲಾದ ಕೇಂದ್ರಗಳಿಗೆ ರಫ್ತು ಮಾಡಲ್ಪಡುತ್ತವೆ. ಇವುಗಳ ವಿತರಣೆಗಾಗಿ ಗಾಜು ಫ್ಯಾಕ್ಟರಿಯನ್ನು ಸ್ಥಾಪಿಸಬಹುದೆಂದೂ, ಕಣ್ಣಡಕಗಳ ಉತ್ಪತ್ತಿಗೂ ಅವಕಾಶ ವಿರುವುದೆಂದೂ, ಸ್ಫಟಿಕ ಗನಿಗಳನ್ನು ಪರೀಕ್ಷೆ ಮಾಡಿದ ಅಧಿಕಾರಿಗಳು ಹೇಳುತ್ತಾರೆ.

* * *

**ಗ**ಂಟೆ ಎಷ್ಟಾಯಿತೆಂದು ಹೇಳುವ ಆಟೋಮಾಟಿಕ್ ಗಡಿಯಾರವನ್ನು ಮದ್ರಾಸು ಸಿಟೀ ಟೆಲಿಫೋನ್ ಸಿಸ್ಟಮ್‌ನಲ್ಲಿ ಏರ್ಪಡಿಸಲಿದ್ದಾರೆ. ಟೆಲಿಫೋನ್ ದ್ವಾರಾ ಸೆಕೆಂಡುಗಳೊಂದಿಗೆ ಸರಿಯಾಗಿ ಗಂಟೆ ತಿಳಿದುಕೊಳ್ಳಲು ಇದರಿಂದ ಸಾಧ್ಯವಿದೆ. ಆಪರೇಟರುಗಳ ಕಂಠಸ್ವರದಲ್ಲೂ, ಉಚ್ಚಾರಣೆಯಲ್ಲಿಯೂ ವ್ಯತ್ಯಾಸ ವಿರಬಹುದು. ಆದ್ದರಿಂದ ಪ್ರತಿದಿನ ಒಂದೇ ಸ್ವರದಿಂದ ಗಂಟೆ ತಿಳಿಸುವಂತೆ ರಿಕಾರ್ಡು ಮಾಡಲಾಗುತ್ತದೆ. ಢಿಲ್ಲಿಯಲ್ಲಿ ನಡೆಸಿದ ಇವರ ಪ್ರಯೋಗವು ಫಲಪ್ರದವಾಗಿದೆ. ಇನ್ನು ಮದ್ರಾಸು,



ಬೊಂಬಾಯಿ, ಕಲ್ಕತ್ತಾ, ನಾಗಪೂರ್, ಕಾನ್ಪೂರ್‌ಗಳಲ್ಲಿ ಇವುಗಳನ್ನು ಏರ್ಪಡಿಸಬೇಕೆಂದು ನಿರ್ಣಯವಾಗಿರುತ್ತದೆ.

* * *

**ಭಾ**ರತದ ಭೂಗರ್ಭ ಸಂಶೋಧನಾ ಶಾಖೆಯಲ್ಲಿ ಭೂತತ್ವದ ಪರಿಶೋಧನೆಗಳನ್ನು ಮುಂದುವರಿಸಲು ಒಂದು ಪ್ರತ್ಯೇಕ ವಿಭಾಗವನ್ನು ಸ್ಥಾಪಿಸಲು ಭಾರತಸರಕಾರವು ನಿಶ್ಚಯಿಸಿರುತ್ತದೆ. ಇದರ ಪ್ರಧಾನ ಕಾರ್ಯಾಲಯವು ಕಲಕತ್ತದಲ್ಲಿರುತ್ತದೆ. ಭೂತತ್ವ ಸಂಶೋಧನೆಗಾಗಿ ದ್ವಿತೀಯ ಪಂಚವರ್ಷ ಪ್ರಣಾಳಿಕೆಯಲ್ಲಿ ೭೦ ಕೋಟಿ ರೂಪಾಯಿಯನ್ನು ಪ್ರತ್ಯೇಕಿಸಲ್ಪಟ್ಟಿದೆ.

* * *

**ಪಾ**ಶ್ಚಾತ್ಯದೇಶಗಳಲ್ಲಿ ಪ್ರಾಚ್ಯವಿಜ್ಞಾನವು ವ್ಯಾಪಿಸಲಿಕ್ಕಾಗಿ ಆಸ್ಯಾ ವಿಜ್ಞಾನ ಸರ್ವಸ್ವವನ್ನು ಸಿದ್ಧಪಡಿಸಬೇಕೆಂದು ಪ್ರಪಂಚ ವಿಜ್ಞಾನಸಮಿತಿ ಆಲೋಚನೆ ಮಾಡುತ್ತಿದೆ. ಆಸ್ಯಾಕ್ಕೂ ಇತರ ಪ್ರಪಂಚಕ್ಕೂ ಪರಸ್ಪರ ಸಾನ್ನಿಹಿತ್ಯವನ್ನು ಹೆಚ್ಚುಗೊಳಿಸಲಿಕ್ಕೆ ತಕ್ಕ ಪಥಕಗಳನ್ನು ಸಿದ್ಧಪಡಿಸಲಿಕ್ಕಾಗಿ ಪ್ರಾನ್ಸಿನಲ್ಲಿ ಇಂಡಿಯಾ ರಾಯಭಾರಿಗಳಾದ ಶ್ರೀ ಕೆ. ಎಂ. ಪಣಿಕ್ಕರ್ ಅಧ್ಯಕ್ಷತೆಯಲ್ಲಿ ನಿಯಮಿಸಲ್ಪಟ್ಟ ಸಲಹಾ ಸಂಘವು ಈ ಸೂಚನೆಯನ್ನು ಅಮೋದಿಸಿರುತ್ತದೆ.

* * *

**ಹೈ**ದ್ರಾಬಾದಿಗೆ ಸುಮಾರು ೧೨೦ ಮೈಲು ದೂರದಲ್ಲಿರುವ ಬೋಧನ್‌ನಲ್ಲಿ ೫ ಕೋಟಿ ರೂಪಾಯಿ ಬಂಡವಳದಿಂದ ನ್ಯೂಸ್ ಪ್ರಿಂಟ್ ಫ್ಯಾಕ್ಟರೀ ಸ್ಥಾಪನೆಗೆ ಸಂಬಂಧಪಟ್ಟ ಕಾರ್ಯಕ್ರಮಗಳು ದ್ವಿತೀಯ ಪಂಚವಾರ್ಷಿಕ ಪ್ರಣಾಳಿಕೆಯ ಕಾಲದಲ್ಲಿ ಪೂರ್ಣವಾಗುವುದೆಂದು ಇಂಡಿಯಾ ಸರಕಾರದ ಪರಿಶ್ರಮ ಮಂತ್ರಿ ಶ್ರೀ ಎಂ. ಎಂ. ಷಾರವರು ಹೇಳಿದ್ದಾರೆ.

* * *

**ಎ**ರಡನೇ ಪ್ರಪಂಚಯುದ್ಧದ ಸಮಯದಲ್ಲಿ ಭಾರತಸರಕಾರವು ಅಮೇರಿಕದೊಡನೆ ಪಡೆದುಕೊಂಡ ಬೆಳ್ಳಿಸಾಲದಲ್ಲಿ, ಪಾಕೀಸ್ತಾನಕ್ಕೆ ಹೋಗಲಾಗಿ ಉಳಿದ ತನ್ನಪಾಲು ೧೭೨೦ ಲಕ್ಷ ಔನ್ಸ್ ಬೆಳ್ಳಿಯಗಟ್ಟಿ ಮತ್ತು ಹಳೆಯ ನಾಲ್ಕಾಣೆ ನಾಣ್ಯಗಳ ಮೂಲಕ ಸಂದಾಯ ಮಾಡಲಿರುವುದೆಂದು ತಿಳಿಯುತ್ತದೆ. ಹಳೆಯ ನಾಲ್ಕಾಣೆ ನಾಣ್ಯಗಳಲ್ಲಿ ಸೇಕಡಾ ೫೦ ರಷ್ಟು ಬೆಳ್ಳಿಯಿದೆ.



## ಚಿತ್ರ ಕಥೆ





ವಾಸು ಮತ್ತು ಗೋಪಿಯರ ಮನೆಗೆ ಸೇರಿದ ಮಾವಿನ ತೋಟದಲ್ಲಿ ಯಾರೋ ಮಾವಿನ ಕಾಯಿ ಕದಿಯುತ್ತಿದ್ದರು. ವಾಸು, ಗೋಪಿಯರು ಕಳ್ಳನನ್ನು ಹುಡುಕಲು ತೋಟದಲ್ಲಿ ಸುತ್ತಾಡುವಾಗ ಒಂದು 'ಬೆರ್ಚಪ್ಪ' ಬೊಂಬೆ ಕೂಗುತ್ತಾ ಅವರನ್ನು ಬೆದರಿಸುತ್ತಿತ್ತು. ತೋಟಕ್ಕೆ ಹೋಗಲಿಕ್ಕೇ ಅವರಿಗೆ ಭಯವಾಯಿತು. ಒಮ್ಮೆ 'ಟೈಗರ್' ತನ್ನ ತಲೆಗೆ ಕಟ್ಟಿದ ರಾಕ್ಷಸ ಮುಖದೊಂದಿಗೆ ತೋಟಕ್ಕೆ ಹೋಗಿ ಬೆರ್ಚಪ್ಪ ಬೊಂಬೆಮೇಲೆ ಹಾರಿತು. ಯಾವುದೋ ಭೂತ ಮೇಲೆ ಬಿತ್ತೆಂದುಕೊಂಡು ಆ ಬೆರ್ಚಪ್ಪದೊಳಗೆ ಅಡಗಿದ್ದ ಕಳ್ಳಹುಡುಗ ಓಡಲು ನೋಡಿದ. ವಾಸು, ಗೋಪಿಯರು ಆತನನ್ನು ಹಿಡಿದರು.





Printed by B. NAGI REDDI at the B. N. K. Press (Private) Ltd., and Published by him for Chandamama Publications, from Madras 26.—Controlling Editor: SRI 'CHAKRAPANI'






Tushar

Photo by T. S. Satyan



ಬಹುಮಾನ
ಪಡೆದ ಶೀರ್ಷಿಕೆ

**ದೊರೆ ಮನೆಯಲ್ಲಿದ್ದರೂ**
**ಧರೆಯ ಸಿಹಿನೀರು ಬೇಕು**

ಕಳಿಸಿದವರು :
ಕೆ. ಸರ್ವೋತ್ತಮ್

